ಉಪನ್ಯಾಸ ಗ್ರಂಥಮಾಲೆ

೮೩

# ನಗೆಗಾರ ನಯಸೇನ

ಡಾ. ಎಂ. ಎಸ್. ಸುಂಕಾಪುರ




ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ನೋ, ೧೯೭೬

ಉಪನ್ಯಾಸ ಗ್ರಂಥಮಾಲೆ

೪೩

# ನಗೆಗಾರ ನಯಸೇನ

ಡಾ. ಎಂ. ಎಸ್. ಸುಂಕಾಪುರ



ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ

ಮೇ, ೧೯೭೬

ಪ್ರಕಾಶಕರು :

ಕುಲಸಚಿವರು,

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦೦೦೩

ಪ್ರಥಮ ಮುದ್ರಣ : ೩,೦೦೦ ಪ್ರತಿಗಳು

ಮಾರ್ಚ್, ೧೯೬೯

ದ್ವಿತೀಯ ಮುದ್ರಣ : ೫,೦೦೦ ಪ್ರತಿಗಳು

ಮೇ, ೧೯೭೩



ಬೆಲೆ : ೨೫ ಪೈಸೆ

ಮುದ್ರಕರು :

ಜಗದೀಶ ಡಿ. ಕಟ್ಟಿ
ಮಹಾಂತೇಶ ಪ್ರಿಂಟಿಂಗ ಪ್ರೆಸ್
ಜಕಣಿಭಾವಿ ರೋಡ, ಧಾರವಾಡ-೫೮೦೦೦೧

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗವಿಸ್ತರಣ ಹಾಗೂ ಪ್ರಕಟನ ಶಾಖೆಯ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರ ಯೋಜನೆಗಳಲ್ಲಿ ಈ "ಉಪನ್ಯಾಸ ಗ್ರಂಥಮಾಲೆ" ಅತ್ಯಂತ ಮುಖ್ಯವೂ, ಜನಪ್ರಿಯವೂ ಅಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಾಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಉಪನ್ಯಾಸಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು, ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗು ವದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರೆವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೨೩೪ ಪುಸ್ತಕಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿ ರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯು ಸಂಪೂರ್ಣ ಪ್ರಯೋ ಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ, ಆರ್. ಸಿ. ಹಿರೇಮಠ
ಧಾರವಾಡ ಕುಲಪತಿಗಳು
೨-೫-೧೯೭೬

# ಮೊತ್ತ ಮೊದಲು

ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರೋಪನ್ಯಾಸ ಮಾಲೆಯು ಧಾರವಾಡ ಜಿಲ್ಹೆಯ ಮುಳುಗುಂದದಲ್ಲಿ ಉಪನ್ಯಾಸ ಶಿಬಿರವೊಂದನ್ನು ಏರ್ಪಡಿಸಿತು. ನನಗೂ ಅದರಲ್ಲಿ ಭಾಗವಹಿಸುವ ಭಾಗ್ಯವನ್ನು ತಂದುಕೊಟ್ಟಿತು. ' ನಗೆಗಾರ ನಯಸೇನ ' ಎಂಬ ವಿಷಯ ಕುರಿತು ಭಾಷಣಮಾಡಿದೆ. ಅಲ್ಲಿ ನೆರೆದ ಕುರಿತೋದದ ಸಭಿಕರು ಸಹ ನಯಸೇನನ ನಗೆಯನ್ನು ನಗುತ್ತಲೇ ಸವಿದರು. ಅಂದು ಅವರು ನಕ್ಕುದನ್ನು ಕಂಡು ' ನನಗೆ ನಗೆ ಬರುತಿದೆ, ಎಂದುಕೊಂಡು ನಯಸೇನನ ನಗೆಯ ಬಗೆಯನ್ನು ಈ ಪುಸ್ತಿಕೆಯಲ್ಲಿ ಸಿಗಿಸಲು ಯತ್ನಿಸಿದ್ದೇನೆ. ನಗೆ ಬೇಕಾಗಿದ್ದರೆ ಇದನ್ನು ಕೊಳ್ಳಿ: ಬೇಡವಾದರೆ ಆಚೆಗೆ ತಳ್ಳಿ. ನಗೆ ಮಾತ್ರ ಮನಸುಖ ರಾಯನ ಮಗ !

ಪ್ರಸಾರೋಪನ್ಯಾಸ ಮಾಲೆಯ ಡಾಯರೆಕ್ಟರ, ಶ್ರೀ ಚನ್ನವೀರ ಕಣವಿ ಅವರು ಅಂದು ಭಾಷಣಮಾಡುವ ಅವಕಾಶವನ್ನು ನನಗೆ ತಂದು ಕೊಟ್ಟರು. ಇಂದು ಅದನ್ನೇ ಬರೆವಣಿಗೆಯ ರೂಪದಲ್ಲಿ ಪ್ರಕಟಿಸುವ ಸಾವಕಾಶವನ್ನು ನಾನು ಅವರಿಗೆ ಕೊಡುತ್ತಿದ್ದೇನೆ. ಕೈಗೆ ಕೈ ಕೂಡಿದರೆ ಚಪ್ಪಾಳೆ. ನಮ್ಮೊ

ಚಪ್ಪಾಳೆಗೆ ರಸಿಕರು ತಿಳಿದು ಚಪ್ಪಾಳೆ ತಟ್ಟಿದರೆ ನಮ್ಮ ಶ್ರಮ ಸಾರ್ಥಕ. ಕೈ ತಟ್ಟುವದು ಕುಳ್ಳು ತಟ್ಟುವಂತೆ ಆಗಬಾರದು. ತಟ್ಟುವ ಕೈಯಲ್ಲಿ ನಮಸ್ಕಾರವೂ ಇದೆ! ಅಂತಹರಿಗೆ ಇದೋ ನಮಸ್ಕಾರ.

ಧಾರವಾಡ ಎಂ. ಎಸ್. ಸುಂಕಾಪುರ
೨೫–೨–೧೯೬೯

# ಪರಿವಿಡಿ

# ನಗೆಗಾರ ನಯಸೇನ

## ವಿಡಂಬನಾತ್ಮಕ ನಗೆ :

ವಿಡಂಬಿಸಿ ನಗುವುದು ಮಾನವನ ಸಹಜ ಸ್ವಭಾವ. ಪರರ ಲೋಪದೋಷಗಳನ್ನು ಕಂಡುಕೊಂಡು ನಗೆಯಾಡುವದು ಮೊದಲಿನಿಂದಲೂ ನಡೆದು ಬಂದ ರೂಢಿ. ತಪ್ಪು ಎಲ್ಲಿಯೇ ಇರಲಿ, ಎಂತಹದೇ ಇರಲಿ-ಅದನ್ನು ಬಯಲಿಗೆಳೆದು ಬೃಹದಾಕಾರದಲ್ಲಿ ಚಿತ್ರಿಸಿ, ಹೀನಾಯಮಾನವಾಗಿ ನಗುವವನೇ ವಿಡಂಬಕ. ಆತನ ನಗೆ ಯಾವಾಗಲೂ ಒಂದೇ ತೆರನಾಗಿ ಇರುವದಿಲ್ಲ; ನೂರು ವೇಷ ಧರಿಸಿ ಮಾರಿಕಾಂಬೆಯಂತೆ ಬಹುರೂಪಗಳಲ್ಲಿ ವ್ಯಕ್ತವಾಗಬಲ್ಲುದು. ಅದು ಒಮ್ಮೊಮ್ಮೆ ಕುಸುಮ ಕೋಮಲ; ಮಗುದೊಮ್ಮೆ ವಜ್ರಕಠೋರ. ಯಾವ ಬಗೆಯ ನಗೆ ಆದಾದರೂ ವಿಡಂಬಕನ ಕೈಗೆ ಸಿಕ್ಕ ವಸ್ತು, ವ್ಯಕ್ತಿ, ಸಮಾಜ ಮತ್ತಾಗಾಗದೆ ಹೋಗದು; ತನ್ನ ಅವಗುಣವನ್ನು ಕಳೆದುಕೊಂಡು ಸತ್ಪಥದತ್ತ ಸಾಗದೆ ಇರದು. ಹೀಗೆ ಮಾತಿನ

ಪೆಟ್ಟಿಗೆ ಸಿಕ್ಕು ನಗಿಸಿಕೊಳ್ಳುವ ವ್ಯಕ್ತಿ ತಲೆತಗ್ಗಿಸದೆ ನಿಲ್ಲಲಾರ. ಮಾತಿನ ಹೊಡೆತ ದೊಡ್ಡದು; ಅದಕ್ಕಿಂತಲೂ ನಗೆಯ ನೆಗೆತ ಇನ್ನೂ ದೊಡ್ಡದು. ಹೀಗೆ ತಪ್ಪಿತಸ್ಥರನ್ನು ಪರಿಹಾಸಕ್ಕೆ ಗುರಿ ಮಾಡುವುದೇ ವಿಡಂಬನೆ. ಒಮ್ಮೊಮ್ಮೆ ವಿಡಂಬಕನು ತನ್ನಲ್ಲಿ ರುವ ಕುಂದು ಕೊರತೆಗಳನ್ನೇ ವಿಡಂಬಿಸಿ ಅಪಹಾಸ್ಯಮಾಡಿ ಕೊಂಡ ಉದಾಹರಣೆಗಳುಂಟು. ಹಾಗೆ ಮಾಡಿಕೊಳ್ಳುವುದಕ್ಕೆ ಮಹತ್ತರವಾದ ಮನೋಧೈರ್ಯ ಬೇಕು. ಅಂತಹನಿಗೆ ಹಾಸ್ಯ ಪ್ರಪಂಚದಲ್ಲಿ ಬಹು ಎತ್ತರದ ಸ್ಥಾನ ದೊರೆಯುತ್ತದೆ. ಆತನ ವಿಡಂಬನೆಯೂ ಉಚ್ಚಮಟ್ಟದ್ದೆನಿಸುತ್ತದೆ. ವಿಡಂಬನೆ ಆತ್ಮಸ್ಥ ವಾಗಿರಬಹುದು; ಇಲ್ಲವೆ ಪರಸ್ಥವಾಗಿರಬಹುದು. ಆದರೆ ಅದರ ಗುರಿ ಮಾತ್ರ ಲೋಕದ ಡೊಂಕನ್ನು ತಿದ್ದುವುದಾಗಿದೆ.

ನಗೆಗಾರನ ದೃಷ್ಟಿ ಹರಿತವಾದುದು. ಸಾಮಾನ್ಯರಿಗೆ ಕಾಣದ ಡೊಂಕು ಆತನಿಗೆ ಸ್ಪಷ್ಟವಾಗಿ ತೋರುವುದು. ಮಾನವನು ಅಪೂರ್ಣತೆಯ ಆಗರ; ಮಾನವನಿರ್ಮಿತ ದೇವರು ಸಹ ಅಪೂರ್ಣರಾಗಿಯೇ ಇದ್ದಾರೆ. ಒಂದು ಮತದವರಿಗೆ ಪರ ಮತದ ದೇವರು ಇನ್ನೂ ಅಪೂರ್ಣರಾಗಿ ಕಾಣಿಸುತ್ತಾರೆ; ಏಕೆಂದರೆ ಕಾಣುವವನ ದೃಷ್ಟಿಯಲ್ಲಿ ತನ್ನ ದೇವರು ಪರಿಪೂರ್ಣ ನೆಂದೇ ನಂಬಿಕೆ. ಆಗ ಅನ್ಯಮತದವರ ಆಚಾರವಿಚಾರಗಳೆಲ್ಲ ಅನಾಚಾರವೆಂಬ ಭಾವನೆ ಧೃಢಗೊಳ್ಳುವುದು. ತನ್ನಲ್ಲಿ ತನ್ನವ ರಲ್ಲಿ ಅಂತಹ ಅಂಕಡೊಂಕು ಕಾಣಿಸುವುದಿಲ್ಲ: ಏಕೆಂದರೆ ತನ್ನ ಬೆನ್ನು ತನಗೆ ಕಾಣಿಸದು. ಇಂತಹ ಪ್ರಸಂಗದಲ್ಲಿ ಅಹಂಭಾವ ಬೆಳೆದು ಧಾರ್ಮಿಕ ವಿಡಂಬನೆಗೆ ದಾರಿಯಾಗುವದು. ತಪ್ಪು

ಎಲ್ಲಿದ್ದರೇನು ? ಅದನ್ನು ನಾಶಗೊಳಿಸಲು ವಿಡಂಬಕ ಮುಂದೆ ಬರುತ್ತಾನೆ. ನಗೆ-ಮಾತಿನಲ್ಲಿ ರೋಷವನ್ನು ಬೆರೆಸಿ,ಆದ ತಪ್ಪನ್ನು ಕ್ಷೀಣಾಯುಮಾನವಾಗಿ ವರ್ಣಿಸುತ್ತಾನೆ. ಅಪಹಾಸ್ಯಕ್ಕೆ ಈಡಾದ ವನು ನೊಂದು ಬೆಂದು ಹೋಗುವನು. ಅಂತಹ ಶಕ್ತಿ ವಿಡಂಬನೆಯ ಮೂಲದಲ್ಲಿ ಹುದುಗಿಕೊಂಡಿರುತ್ತದೆ.

ಮಾನವನು ಸಮಾಜ ಜೀವಿ; ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಣವಕ್ಕು! ಆದರೆ ಆ ಭಾವ ಇರುವುದು ಎಷ್ಟು ಜನರಲ್ಲಿ? 'ತಾ ಬಲ ಜಗ ಬಲ' ಎನ್ನುವ ಮಾನವನು ಸ್ವಾರ್ಥ ಕ್ಕಾಗಿ ಸಮಾಜದ್ರೋಹ ಬಗೆಯುತ್ತಾನೆ. ಆಲಸ್ಯ, ಹೇಡಿತನ, ಮೂರ್ಖತನ ಒಳಜಗಳ ಮೊದಲಾದ ಸ್ವಭಾವದೋಷಗಳು ಸಮಾಜಜೀವಿಗಳಲ್ಲಿ ಹೇಗೋ ಬೆಳೆದುಕೊಂಡು ಬರುತ್ತವೆ. ಇಂತಹ ವ್ಯಕ್ತಿಗಳಿಂದ ಸಮಾಜದ ಸ್ವಾಸ್ಥ್ಯ ಹಾಳಾಗುತ್ತದೆ. ಸ್ವಭಾವದೋಷಗಳು ಅನಂತ; ಒಂದರಿಂದ ಇನ್ನೊಂದು ಚಿಗು ರೊಡೆಯುತ್ತದೆ. ಒಂದನಾಡಹೋಗಿ ನೂರಾಡುವ ರೂಢಿಯ ಎಲೆ ಬಿಡುತ್ತವೆ. ಅದಕ್ಕೆ ಅಹಂಕಾರದ ಹೂ ಅರಳುತ್ತವೆ. ಮೋಸಗಾರಿಕೆಯ ಕಾಯಿ ಬಿಡುತ್ತವೆ. ಕೊನೆಗೆ ದೋಷಗಳ ಮುದ್ದೆಯಾಗುವುದೇ ಆ ಬಾಳಗಿಡದ ಫಲ. ಸ್ವಭಾವದೋಷ ವಿಡಂಬಕನಿಗೆ ಉತ್ತಮ ಸಾಮಗ್ರಿ. ಅದು ವ್ಯಕ್ತಿಯಲ್ಲೇ ಇರಲಿ, ಶಕ್ತಿಯಲ್ಲೇ ಇರಲಿ;ಸಮಾಜದಲ್ಲಿಯೇ ಇರಲಿ;ರಾಜಕೀಯದಲ್ಲೇ ಇರಲಿ; ವಿಡಂಬಕನು ಕಂಡು ಸಹಿಸುವುದಿಲ್ಲ; ತನ್ನ ಮಾತಿನ ವೈಖರಿಯಲ್ಲಿ ಅವನ್ನೆಲ್ಲ ಕಿತ್ತು ಬೀಸಾಡುತ್ತಾನೆ, ಅಷ್ಟು ಮಾಡಿ ದಾಗಲೇ ಆತನಿಗೆ ಸಮಾಧಾನ. ಅವನು ಬೈದುದು ನಗೆ

ಮಾಡಿದುದು ತನಗೆ ಸಂಬಂಧವಿಲ್ಲೆಂದು ಹೇಳಿಕೊಳ್ಳುವ ದುಃಸ್ವಭಾವಿಗಳು ಹೆಚ್ಚಾದರೆ ವಿಡಂಬಕನ ಗತಿಯೇನು ? ಸಮಾಜೋದ್ಧಾರಕ್ಕಾಗಿಯೇ ಯುಗ ಯುಗದಲ್ಲಿ ಹುಟ್ಟಿ ಬರುತ್ತೇನೆಂದು ಶ್ರೀ ಕೃಷ್ಣನೇ ಹೇಳಿಲ್ಲವೆ ? ಹಾಗೆ ತನ್ನ ಕೈಯಿಂದ ಆದಾಗದೆಂದು ಹೇಳಿಕೊಳ್ಳುವ ಹೇಡಿಯಲ್ಲ ವಿಡಂಬಕ! ವಿಡಂಬನೆಯ ಪರಿಣಾಮ ಕುಂಬಳಕಾಯಿಯಷ್ಟು ಆಗದೇ ಇದ್ದರೂ ರಾಗಿಕಾಳಿನಷ್ಟು ಆಗದೇ ಇರದು.

ಅಣಕವೇ ವಿಡಂಬನೆಯ ಬೀಜ. ಅದು ಮೊದಮೊದಲು ಮೂಕಿ, ಮಾತು ಬೆಳೆದಂತೆಲ್ಲ 'ಟಾಕಿ' ಆಯಿತು. ಭಾಷೆ ಬೆಳೆದಂತೆ ಆ ಅಣಕವೇ ವಿವಿಧರೂಪ ಧರಿಸಿ ಬೆಳೆಯುತ್ತ ಬರುತ್ತದೆ. ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಗೆ ಸಂದರ್ಶನವಿತ್ತಾಗ ಮಾತುಕತೆಗೆ ಮೊದಲಾಗುವುದು. ಮಾತು ಮುಂದುವರಿದ ಹಾಗೆ ಮೂದಲಿಗೆ ನೆರವಾಗುವುದು. "ರಾಮರಾಯರ ಅಳಿಯನೊಬ್ಬ ಹುಲುಗಾಮ: ಅವರ ಹೆಂಡತಿ ಡಬಲ್ ಸೀಟು"–ಇನ್ನೂ ಏನೇನೋ ವಿಡಂಬನಾತ್ಮಕ ಮಾತು. ಮೂದಲಿಯಲ್ಲಿ ಕ್ರೋಧ ಕೂಡಿದರೆ ಕಟಕಿಯೆನಿಸುವುದು. ಹೀಯಾಳಿಸಿ ನಗುವ ನಗೆಯಲ್ಲಿ ಸಂತಾಪ ಬೆರೆತಾಗ ವಿಡಂಬನೆಯೊಂದು ಅಗ್ನ್ಯಸ್ತ್ರವಾಗುತ್ತದೆ. ಅಂತಹ ಕಠೋರ ನಗೆಗೆ ತುತ್ತಾದವನು ಸತ್ತುಹುಟ್ಟುತ್ತಾನೆ. ವಿಡಂಬಕನ ಬತ್ತಳಿಕೆ ಇಂತಹ ಅಸ್ತ್ರಗಳಿಂದ ತುಂಬಿರುತ್ತದೆ. ಆತನು ಸಂದರ್ಭಾನುಸಾರವಾಗಿ ಅವುಗಳನ್ನು ಬಳಸಿಕೊಳ್ಳುತ್ತಾನೆ. ಮನೆಮಾತಿನಲ್ಲಿರುವ ಈ ವಿಡಂಬನೆಯನ್ನೇ ಕವಿಯಾದವನು ತನ್ನ ಪ್ರತಿಭಾ ಬಲದಿಂದ ಬಹು ರಮಣೀಯವಾಗಿ ಬಳಸಿ

ಕೊಳ್ಳುತ್ತಾನೆ. ಸಾಮಾನ್ಯರ ವಿಡಂಬನೆ ಮೂಗಿನಲ್ಲಿರುವ ಕೂದಲು ಕಿತ್ತಂತೆ; ಕವಿಯಮಾಡುವುದು ಬೆಣ್ಣೆಯೊಳಗಣ ದಾರ ಎಳೆದಂತೆ ! ಹೀಗೆನ್ನಲು ನಮ್ಮದು ಬಿರುಸು; ಕವಿಯದು ಸರಸ–ಎಂದು ಭಾವಿಸಲಾಗದು. ಕವಿಯ ಪ್ರತಿಭೆ ಲೀಲಾಜಾಲ ವಾಗಿಯೇ ಆ ಕಾರ್ಯವನ್ನು ಮಾಡಿ ಮುಗಿಸುವದರಿಂದ ಅದನ ವಿಡಂಬನೆ ಹೊರಮೈಗೆ ಮೃದುವಾದರೂ ಒಳಗೊಳಗೆ ಹದನ ವಾದ ಚೂರಿಯಂತೆ ಇರಿಯುವುದನ್ನು ಸೂಕ್ಷ್ಮಮತಿ ಗುರುತಿಸುವನು, ಅದೇ ನಿಜವಾದ ವಿಡಂಬನೆ ಸಾಹಿತ್ಯ.

ಕವಿಯ ವಿಡಂಬನೆ ಡಾಂಭಿಕತನವನ್ನು ಬೈಲಿಗೆಳೆದು ತಿದ್ದುವ ಕಾರ್ಯಕ್ಕೆ ಅಣಿಯಾಗುತ್ತದೆ. ಜನರ ದುರ್ಗುಣಗಳು ವಿಡಂಬನೆಯ ರಾವುಗನ್ನಡಿಯಲ್ಲಿ ಬೃಹದಾಕಾರ ತಾಳುತ್ತವೆ; ನಗೆಯ ಹೊಡೆತಕ್ಕೆ ಸಿಕ್ಕು ನುಚ್ಚುನೂರಾಗುತ್ತವೆ. ವಿಡಂಬಕನಿಗೆ ಒಮ್ಮೊಮ್ಮೆ ಅನ್ಯರ ಹುಚ್ಚುತನವೇ ಕಥಾವಸ್ತುವಾಗುವದು. ಬಾಯರನ್ನನು ಹುಚ್ಚರನ್ನು ಕಂಡಾಗಲೆಲ್ಲ Fools are my theme ; Let Satire be my Sog” ಎಂದು ಆಡಿಕೊಳ್ಳು ತ್ತಿದ್ದುದು ಇದಕ್ಕಾಗಿಯೇ, ವಿಡಂಬಕನು ಶಾಲಾಶಿಕ್ಷಕನಂತೆ ಬರಿ ಉಪದೇಶಕನಲ್ಲ; ತತ್ತ್ವಜ್ಞಾನಿಯಂತೆ ಕೈಗೆ ನಿಲುಕದ್ದನ್ನು ವರ್ಣಿಸುವ ಭಾರೀ ವರ್ಣಕನಲ್ಲ. ನೀತಿವಂತರ ಮುಖಂಡನಂತೂ ಮೊದಲೇ ಅಲ್ಲ. ಅವನನ್ನು ಮಾನಸಿಕ ಜಗತ್ತಿನ ಜಲಗಾರನೆಂದು ಕರೆದರೆ ಅಚ್ಚರಿಪಡಬೇಕಾಗಿಲ್ಲ. ವಿಡಂಬಕನ ವಾಣಿ ವಕ್ರ; ಹೃದಯ ಸರಳ. ಅನ್ಯರನ್ನು ಬೈಯಲೆಂದೇ ಬ್ರಹ್ಮನು ಆತನ ಸೃಷ್ಟಿ ಮಾಡಿಲ್ಲ. ಬೆನ್ನಿನ ಮೇಲೆ ಬಿಗಿದು ಮುಖದ ಮೇಲೆ ಥೂ

ಎಂದರೆ ವಿಡಂಬನೆಯಾಗದು, ನಿಂದೆಗೆ ಹಾಸ್ಯದ ಒಪ್ಪವಿರುತ್ತದೆ; ಅದು ಜೆಪ್ಪನಿಗೂ ಹೊಳೆಯಬಲ್ಲದು; ತಿಪ್ಪನಿಗೂ ತೀರಿಯ ಬಲ್ಲದು; ಸಪ್ಪೆಮುಖದಲ್ಲಿಯೂ ಸುಳಿಯಬಲ್ಲದು. ಅದಕ್ಕೆ ಇನ್ನೊಂದು ಹೆಸರು ವಿಡಂಬನಾತ್ಮಕ ನಗೆ.

ಉತ್ತಮ ವಿಡಂಬನೆಯಲ್ಲಿ ನ್ಯಾಯಬುದ್ಧಿ, ಕಲಾವಂತಿಕೆ ಮನೆಮಾಡಿಕೊಂಡಿರುತ್ತವೆ. ನ್ಯಾಯಬುದ್ಧಿಯನ್ನರಿಯದ ನಗೆಗಾರ ಸಮಾಜಘಾತಕ; ಕಲಾವಂತಿಕೆಯಿಲ್ಲದ ಅವನ ಮಾತು ಗೂಳಿಯ ಡುರುಕಾರವ. ಅರ್ಥವಿಲ್ಲದೆ ನಗುವುದು ನಾನ್‌ಸೆನ್ಸ. ಬೈಗಳನ್ನೇ ಬೊಗಳುವುದು ಕೊಳಕ ಬಾಯಿ. ಅಂತಹವನಿಗೆ ಕೊಳಕ (Synic) ಎಂದು ಹೆಸರು. "The synic hates the world for not existing." ಕೊಳಕನ ಮಾತಿಗೆ ಕವಡೆಯ ಬೆಲೆಯಿಲ್ಲ; ಅವನ ಕೃತಿಗೆ ತಲೆದೂಗುವ ಮಾನ್ಯರಿಲ್ಲ. ಸತ್ವಪೂರ್ಣ ನಗೆಗೆ, ಸತ್ಯ-ಪೂರ್ಣ ವಿಡಂಬನೆಗೆ ಚ್ಯುತಿಯಿಲ್ಲ, ಮಿತಿಯಿಲ್ಲ, ಅಹಿತವಿಲ್ಲ. ವಿಡಂಬನೆ ಭೂಮದ ಹಾದಲ್ಲ; ಮೂಗು ಮುಚ್ಚಿಕೊಳ್ಳುವಂತಹ ಭೀಭತ್ಸವಲ್ಲ; ಸೊಟ್ಟಸಿಟ್ಟಿನ ರಗಳೆಯಲ್ಲ. ಸಿಟ್ಟು, ಸ್ವಾಭಿಮಾನ, ವಿನೋದ–ಒಟ್ಟಾಗಿಯೇ ಬಂದರೂ ಅಪಹಾಸವಲ್ಲ. ಅದು ಅಣಕಕ್ಕೆ ಸಮೀಪವಾದರೂ ಸ್ವಾಭಿಮಾನದಿಂದ ಬಹುದೂರ. ಹೀಗೆ ವಿಡಂಬನೆಯು ನಾನಾ ಪ್ರಕಾರಗಳಿಗೆ ಸಿಟ್ಟು, ಸ್ವಾಭಿಮಾನ, ವಿನೋದಗಳ ಸರಿಬೆರಕೆ, ಕಲಬೆರಿಕೆ ಕಾರಣವಾಗುವುವು. ನಗೆಯ ಸ್ವಭಾವಗುಣವನ್ನು ಅರಿಯಲು ಈ ಮೂರೇ ಮೂಲ; ಅವೇ ನಗೆಗೆ ಕೀಲ.

ನಗೆ ಇಲ್ಲದೆ ವಿಡಂಬನೆಯಿಲ್ಲ; ಒಂದಿಲ್ಲೊಂದು ಬಗೆಯ ನಗೆ ಅದರಲ್ಲಿ ಇದ್ದೇ ಇರಬೇಕು. ಹೀಗೆ ನಗೆಯ ವಿರುಪೇರುಗಳಿಂದ ಕೂಡಿದ ವಿಡಂಬನೆ ಹಲವು ಬಗೆಯಾಗಿ ಮೆರೆಯುತ್ತದೆ. ವಿಡಂಬಕನ ಬತ್ತಳಿಕೆಯಲ್ಲಿ ಪರಿಹಾಸ, ಅಪಹಾಸ, ಮೂದಲಿಕೆ, ನಿಂದ, ಹುಚ್ಚುಹಾಸ್ಯ, ವಿಕಟಹಾಸ್ಯ, ಚತುರೋಕ್ತಿ, ಗೇಲಿ, ವಕ್ರೋಕ್ತಿ, ವ್ಯಂಗ್ಯೋಕ್ತಿ ಮುಂತಾದ ನಗೆಬಾಣಗಳಿರುವುದನ್ನು ಕಾಣುತ್ತೇವೆ. ಚತುರೋಕ್ತಿಯೇ ಈ ನಗೆಬಾಣಗಳಲ್ಲಿ ಹಿರಿದೆಂದು ಹೇಳುವವರೂ ಇದ್ದಾರೆ. ಅದೇ ವಿಡಂಬನಾತ್ಮಕ ನಗೆಗೆ ಜೀವಜೀವಾಳ. ಇಂತಹ ಹಾಸ್ಯಪ್ರಭೇದಗಳು ವಿಡಂಬಕನ ಶೈಲಿಯಲ್ಲಿ ಲೀಲಾಜಾಲವಾಗಿ ಹೊಂದಿಕೊಂಡು ಕಾರ್ಯ ಸಾಧಿಸುತ್ತವೆ. ಒಂದಿಲ್ಲೊಂದು ರೀತಿಯಲ್ಲಿ ಚುಚ್ಚುವುದೇ ಅವುಗಳ ಸ್ವಭಾವ. ಹೀಗಿದ್ದರೂ ವಿಡಂಬನೆಯ ಬಲ್ಲೆಗೆ ತುತ್ತಾದವನು ಸಾಯುವುದಿಲ್ಲ, ಬದುಕುತ್ತಾನೆ. ವೈದ್ಯನ ಶಸ್ತ್ರಚಿಕಿತ್ಸೆ ರೋಗಿಗೆ ಗುಣ ಕೊಡುತ್ತದೆ; ಅವನ ಮಾತ್ರೆಗಳು ಅಧರಕ್ಕೆ ಕಹಿಯಾದರೂ ಉದರಕ್ಕೆ ಸಿಹಿ ನೀಡುತ್ತವೆ. ಆದ್ದರಿಂದಲೇ 'ವಿಡಂಬಕನೊಬ್ಬ ವೈದ್ಯ' ಎಂದು ಅನುಭಾವಿಗಳು ಹೇಳುವರು.

ಉತ್ತಮ ದರ್ಜೆಯ ವಿಡಂಬಕನ ಹೃದಯವು ಸ್ವಚ್ಛವಾಗಿರುತ್ತದೆ. ಕೋಪ-ತಾಪಗಳು ಅವನ ಮಾತಿನಲ್ಲಿ ಇರುತ್ತವೆಯೋ ಹೊರತು ಅವನ ಹೃದಯದಲ್ಲಿರುವದಿಲ್ಲ. ಸಹೃದಯ ಇಲ್ಲದವನ ವಿಡಂಬನೆ ಮೇಲುಮಟ್ಟದ ನಗೆಯೆನಿಸಲಾರದು. ವಿಡಂಬಕನು ವ್ಯಕ್ತಿಯನ್ನು ದೂಷಿಸುವುದಿಲ್ಲ; ಸಮಾಜವನ್ನು ಅಲ್ಲಗಳೆಯುವುದಿಲ್ಲ; ಅಲ್ಲಿ ಅಡಗಿರುವ ಆದರ್ಶಚ್ಯುತಿಯನ್ನು ಹೊಡೆ

ದೆಬ್ಬಿಸುತ್ತಾನೆ. ಸಮಾಜದ ಸ್ವಾಸ್ಥ್ಯವನ್ನು ಕಾಯುವುದಕ್ಕಾಗಿಯೆ ವಿಡಂಬಕನ ಜನನ. ಏತಕ್ಕಾಗಿ ನಗಬೇಕು, ಎಷ್ಟು ನಗಬೇಕು, ಹೇಗೆ ನಗಬೇಕು-ಎನ್ನುವುದು ಅವನಿಗೇ ಗೊತ್ತು. ಅವನಿಗೆ ಅದನ್ನು ಯಾರೂ ಕಲಿಸುವುದಿಲ್ಲ. ವಿಡಂಬಕನ ಸೃಷ್ಟಿ ಕರ್ತಾರನ ಕಮ್ಮಟ, ಕಮ್ಮಾರನ ಕುಲುಮೆ. ಕರ್ಮಕಾರನಾದ ವಿಡಂಬಕನು ನಾನಾ ಬಗೆಯ ನಗೆಯ ಚಾಣಸುತ್ತಿಗೆಗಳಿಂದ ಅಂಕಡೊಂಕನ್ನು ಕಾಸಿ ಬಡಿಯುತ್ತಾನೆ,ಬಡಿದು ಕಾಸುತ್ತಾನೆ.ಹದವರಿತು ಕಾರ್ಯ ಮಾಡುವುದು ಅವನಲ್ಲಿ ಹುದುಗಿದ ಕಲೆ. ಕೈಗೆ ಸಿಕ್ಕವನ್ನು ಸುಟ್ಟು ಬಿಡುವುದೇ ವಿಡಂಬನೆಯಲ್ಲ; ಕೊಂಕನ್ನು ತಿದ್ದಿ ಹೊಸ ಸೃಷ್ಟಿಗೆ ಮಾರ್ಗ ಮಾಡಿಕೊಡುವುದು ಅದರ ಗುರಿ.ವಿಡಂಬಕನು ಬಹಿರಂಗದಲ್ಲಿ ರುದ್ರನಂತೆ ವರ್ತಿಸಿದರೂ ಅಂತರಂಗದಲ್ಲಿ ಶಿವ ವಾಗಿರುವುದು ಸುಳ್ಳಲ್ಲ. ದಯೆ, ಕರುಣೆ, ಮರುಕ ಅತನಲ್ಲಿ ಇಲ್ಲದೇ ಇರುವುದಿಲ್ಲ. ನಗೆಯೊಂದು ಕೈದೀವಿಗೆ; ಸತ್ಯವನ್ನರಸು ವುದೇ ಅದರ ಗುರಿ

ದ್ವೇಷಕ್ಕಾಗಿ ದ್ವೇಷಬೆಳೆಸುವ ಗುಣ ಉತ್ತಮ ವಿಡಂಬಕ ನಲ್ಲಿ ಇರಲಾರದು. ದ್ವೇಷವೊಂದು ವಿಷ. ದ್ವೇಷಬುದ್ಧಿಯ ವಿಡಂಬಕ ಇಡೀ ಪ್ರಪಂಚವನ್ನೇ ದ್ವೇಷಿಸುತ್ತ ಹೊರಡುತ್ತಾನೆ ಎಲ್ಲೆಲ್ಲಿಯೂ ವಿಷವ ಬೀಜವನ್ನು ಬಿತ್ತುತ್ತಾನೆ. ಅವನಿಂದ ಯಾರಿಗೂ ಲಾಭವಿಲ್ಲ. ಆದ್ದರಿಂದ ವಿಡಂಬಕನಾದವನು ದ್ವೇಷಾಸೂಯೆಗಳನ್ನು ತೊರೆಯುವುದೇ ಲೇಸು. ಅತನು ಸಹೃದಯನಾಗಿ ಜನತೆಯ ಗೋಳಿಗೆ ಮರುಕು ತಾಳಿ, ನಿಷ್ಪಕ್ಷ ವಾಗಿ ವಿಡಂಬಿಸುವುದು ವಿಹಿತ. ಅಂಥವನಿಂದ ಒಳ್ಳೆಯ

ಸಾಹಿತ್ಯ ನಿರ್ಮಾಣವಾಗುತ್ತದೆ; ಜನತೆಯ ಕಲ್ಯಾಣವಾಗುತ್ತದೆ; ಅವನು ನಕ್ಕ ನಗೆ ಅಮರವಾಗಬಲ್ಲುದು. ಕನ್ನಡ ಸಾಹಿತ್ಯದಲ್ಲಿ ಉತ್ತಮ ವಿಡಂಬಕರು ಸಾಕಷ್ಟಿದ್ದಾರೆ; ನಗೆಗಾರರೆಂದು ಖ್ಯಾತಿ ಪಡೆದಿದ್ದಾರೆ. ಅವರಲ್ಲಿ ನಯಸೇನನಿಗೆ ಒಂದು ವಿಶಿಷ್ಟಸ್ಥಾನ ಮೀಸಲಾಗಿದೆ. ಅವನ ನಗೆಯೂ ವೈಶಿಷ್ಟ್ಯಪೂರ್ಣವಾಗಿದೆ.

**ಕವಿ ನಯಸೇನ:**

ಧಾರವಾಡ ಜಿಲ್ಲೆಯಲ್ಲಿರುವ ಮುಳಗುಂದ ನಯಸೇನನು ಬಾಳಿ ಬೆಳೆದ ಊರು. ತನ್ನನ್ನು ನಯಸೇನ, ನಯಸೇನದೇವ, ನಯಸೇನ ಮುನೀಂದ್ರ-ಮುಂತಾಗಿ ಕರೆದುಕೊಂಡಿದ್ದಾನೆ.ತಂದೆ ತಾಯಿ,ಬಂಧು ಬಳಗ ಮುಂತಾದವರ ವಿಚಾರದಲ್ಲಿ ಆತ ಏನನ್ನೂ ಹೇಳಿಕೊಂಡಿಲ್ಲ. ಇದಕ್ಕೆ ಕಾರಣ ಅವನು ಸಂನ್ಯಾಸಿ ಯಾದುದೇ ಇರಬೇಕು. ಈತನಿಗೆ ಸುಕವಿನಿಕರಪಿಕಮಾಕಂದ, ಸೂಕ್ತಕವಿತಾವಿಳಾಸ, ವಾತ್ಸಲ್ಯರತ್ನಾಕರ, ಸುಕವಿಜನಮನಃ ಪದ್ಮಿನೀರಾಜಹಂಸ ಮುಂತಾದ ಬಿರುದುಗಳು ಇವೆ. ನಯ ಸೇನನು ಜೈನಧರ್ಮವನ್ನೂ ಜಿನತತ್ತ್ವವನ್ನೂ ಸಾಕಷ್ಟುಅಭ್ಯಾಸ ಮಾಡಿದುದಲ್ಲದೆ ತರ್ಕ, ವ್ಯಾಕರಣ, ಛಂದಸ್ಸು ಮುಂತಾದ ಶಾಸ್ತ್ರವಿಷಯಗಳನ್ನು ಅರಿತು ನುರಿತವನಾಗಿದ್ದ.

ನಯಸೇನನ ಗುರು ನರೇಂದ್ರಸೇನ ಮುನಿ.ಆತನು ಮಹಾ ತಪಸ್ವಿಯಾಗಿದ್ದುಕೊಂಡು ಬಹುಶ್ರುತ ಪಂಡಿತನಾಗಿ ಮೆರೆದವ ನೆಂದು ನಯಸೇನ ಒಳ್ಳೆಯ ಅಭಿಮಾನದಿಂದ ಹೇಳಿದ್ದಾನೆ. ನರೇಂದ್ರಸೇನ ಮುನಿಯು ಯೋಗ್ಯತೆ ಬಹು ದೊಡ್ಡದು.ಅವರು ಸಿದ್ಧಾಂತದಲ್ಲಿ ಜಿನಸೇನಾಚಾರ್ಯರನ್ನೂ ಶಾಸ್ತ್ರಪಾಂಡಿತ್ಯದಲ್ಲಿ

ಪೂಜ್ಯಪಾದ ಮುನಿಗಳನ್ನೂ ಷಟ್ತರ್ಕದಲ್ಲಿ ಖ್ಯಾತಿವೆತ್ತ ಸಮಂತ ಭದ್ರಮುನಿಗಳನ್ನೂ ಮೀರಿಸಿದ್ದರಂತೆ. ಇವರ ಪಾಂಡಿತ್ಯಕ್ಕೆ ಮೆಚ್ಚಿ ಗುಣಚಂದ್ರಪಂಡಿತರು ನರೇಂದ್ರಸೇನ ಮುನಿಗಳಂತಹ ವಾಗೀಶರೇ ಮತ್ತೊಬ್ಬರಿಲ್ಲವೆಂದು ಹೊಗಳಿದರಂತೆ. ವ್ಯಾಕರಣ ವಿಷಯದಲ್ಲಿ ನರೇಂದ್ರಸೇನರ ಪಾಂಡಿತ್ಯ ಅದ್ವಿತೀಯವಾದುದು. 'ಚಾಂದ್ರಾಯಣ'ಮುಂತಾದುವು ಅವರಿಗೆ ಏಕಾಕ್ಷರವೆನಿಸಿದ್ದುವು. ಇಂತಹ ಪಂಡಿತ ಗುರುಗಳ ಸನ್ನಿಧಿಯಲ್ಲಿಕುಳಿತು ತರ್ಕ,ವ್ಯಾಕರಣ ಶಾಸ್ತ್ರಗಳ ಅಭ್ಯಾಸವನ್ನು ಮಾಡುವ ಭಾಗ್ಯ ನಯಸೇನನದಾಗಿತ್ತು. ಆತನೂ ಒಂದು ವ್ಯಾಕರಣವನ್ನು ಕನ್ನಡದಲ್ಲಿಬರೆದುದಾಗಿ ತಿಳಿದು ಬಂದಿದೆ. ಆದರೆ ಆ ಕೃತಿ ಇಂದು ನಮಗೆ ದೊರೆತಿಲ್ಲ. ಆತನ 'ಧರ್ಮಾಮೃತ' ಲಭ್ಯವಾಗಿದೆ.

ಮುಳಗುಂದದೊಳಿರ್ದು ಮಹೋ
ಜ್ವಳ ಧರ್ಮಾಮೃತಮನರ್ತಿಯಿಂದು ಭವ್ಯಾ
ವಳಿಗಱುಪಿದಂ ಧರಿತ್ರೀ
ತಳಪೂಜ್ಯಂ ಸುಕವಿನಿಕರಪಿಕಮಾಕಂದಂ ॥

ಧರ್ಮಾಮೃತವು ಮಹೋಜ್ವಲಕೃತಿಯಾಗಿದ್ದು ಸಂಸಾರಿಗಳಾದ ಜೈನರು ಯಾವ ರೀತಿ ಧರ್ಮವನ್ನು ಆಚರಿಸಬೇಕೆಂಬುದನ್ನು ಬೋಧಿಸುತ್ತದೆ.

ನಯಸೇನನು ಧರ್ಮಾಮೃತವನ್ನು ಬರೆದು ಮುಗಿಸಿದ ಕಾಲವನ್ನು ಸ್ಪಷ್ಟವಾಗಿ ತಿಳಿಸಿದ್ದಾನೆ. ಶಾಲಿವಾಹನ ಶಕೆ ೧೦೩೭ರ ನಂದನ ಸಂವತ್ಸರದಲ್ಲಿ ಭಾದ್ರಪದ ಮಾಸ ಶುಕ್ಲಪಕ್ಷ ಪಾಡ್ಯ

ಆದಿತ್ಯವಾರದಂದು ಕೃತಿ ಮುಕ್ತಾಯವಾಗಿದೆ. ಆದ್ದರಿಂದ ಆತನು ಕ್ರಿ.ಶ. ೧೧೧೨ ರಲ್ಲಿ ಬಾಳಿದನೆಂದು ಹೇಳಬಹುದಾಗಿದೆ.

## ಧರ್ಮಾಮೃತ :

ಈ ಗ್ರಂಥದಲ್ಲಿ ಗೃಹಸ್ಥರು ಆಚರಿಸಬೇಕಾದ ವ್ರತ ನಿಯಮಗಳನ್ನು ಕಥೆಯ ಮುಖಾಂತರ ತಿಳಿಸಲಾಗಿದೆ. ಹದಿನಾಲ್ಕು ಅಧ್ಯಾಯಗಳಲ್ಲಿ ಪದಿನಾಲ್ಕು ಕಥೆಗಳಿದ್ದು, ಕಥೆಗೆ ಉಪಕಥೆಗಳೂ ಸಾಕಷ್ಟು ಬಂದಿವೆ. ಕಥೆಹೇಳುವವರು ಗೌತಮರು ; ಕೇಳುವವನು ಮಗಧರಾಜನಾದ ಶ್ರೇಣಿಕಮಹಾರಾಜನು. ದರ್ಶನ ನಿಶ್ಶಂಕೆ ಮೊದಲಾದ ಅಷ್ಟಗುಣ, ಪಂಚಾಣುವ್ರತ ಮುಂತಾದ ಹದಿನಾಲ್ಕು ಮಹಾರತ್ನಗಳಲ್ಲಿ ಒಂದೊಂದನ್ನು ಆಚರಿಸಿ ನಿರ್ವೃತಿಯನ್ನು ಪಡೆದ ಮಹಾಪುರುಷರ ಪುಣ್ಯಕಥೆಗಳನ್ನೇ ಇಲ್ಲಿ ಹೆಣೆಯಲಾಗಿದೆ. ಕಥೆಗಳನ್ನು ಆಯ್ಕೆ ಮಾಡುವಲ್ಲಿ ನಯಸೇನ ತನ್ನ ಕಲಾವಂತಿಕೆಯನ್ನು ತೋರಿದ್ದಾನೆ. ಒಂದೊಂದೂ ಅಷ್ಟೊಂದು ಮಧುರ, ಅಷ್ಟೊಂದು ಮನೋಹರ!

ಈ ಕಥೆಗಳಿಗೆ ಆಕರ ತಿಳಿಯದು. ಕಥೆಗಳನ್ನು ಹೇಳಿ ಜಿನ ತತ್ತ್ವವನ್ನು ಬೋಧಿಸುವ ಮಾರ್ಗ ಪೂರ್ವಕಾಲದಿಂದಲೇ ನಡೆದು ಬಂದಿದೆ. ಇಂತಹ ಕಥೆಗಳು ಜೈನಮತವನ್ನು ಬೋಧಿಸುವ ಸಂಸ್ಕೃತ, ಪ್ರಾಕೃತ ಗ್ರಂಥಗಳಲ್ಲಿ ಸಾಕಷ್ಟು ಬಂದಿವೆ. ತನ್ನ ಉದ್ದೇಶ ಸಾಧನೆಗೆ ಒಗ್ಗುವಂತಹ ಕಥೆಗಳನ್ನೇ ಕವಿ ಭಿನ್ನಭಿನ್ನ ಗ್ರಂಥಗಳಿಂದ ಆಯ್ದುಕೊಂಡಿರಬೇಕು. ಆ ಮುಖವಾಗಿ ಸಂಶೋಧನೆ ನಡೆಯುವುದು ಅಗತ್ಯ.

ಧರ್ಮಾಮೃತವು ಒಂದು ಸಹಜ ಕಾವ್ಯ, ಕವಿಯಲ್ಲಿ ಸಾಕಷ್ಟು ಪ್ರತಿಭೆ ಇದ್ದರೆ ಆತನ ಕಾವ್ಯ ಸರಳ ಸಹಜ ಎನಿಸುವುದು. ಅದಿಲ್ಲದೆ ಬರಿ ಪಾಂಡಿತ್ಯಬಲದಿಂದಲೇ ಕಾವ್ಯ ನಿರ್ಮಿಸಿದರೆ ಸತ್ಕಾವ್ಯವಾಗಲಾರದು. ಧರ್ಮಾಮೃತವೊಂದು ಸರಸ ಕಾವ್ಯವೆಂದು ನಯಸೇನನ ಅಭಿಪ್ರಾಯ :

ಮಳೆಯಿಲ್ಲದೆ ಪೊಯ್ನೀರಿಂ
ಬೆಳೆಗುಮೆ ಧರೆ ಮಱುಗಿ ಕುಱಿದು ಶಾಸ್ತ್ರದ ಬಲದಿಂ
ದಳಿಪಿಂ ಪೇೞ್ದೊಡಮದು ಕೋ
ಮಳಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ ॥

ಉಪ್ಪಿಲ್ಲದ ಊಟ ಸಪ್ಪೆ ಸಪ್ಪೆ ! ಒಕ್ಕಳ ತುಪ್ಪವಿದ್ದರೂ ಉಪ್ಪಿಲ್ಲದೆ ಊಟವಾಗಲಾರದು. ಶಾಸ್ತ್ರ ತುಪ್ಪ; ಪ್ರತಿಭೆ ಉಪ್ಪು. ಎಷ್ಟು ಮನೋಹರ ಹೋಲಿಕೆ ನಯಸೇನನದು!

ನಯಸೇನನ ಕನ್ನಡದ ಅಭಿಮಾನ ದೊಡ್ಡದು. ಕನ್ನಡದ ಕಹಳೆಯನ್ನು ಎತ್ತಿ ಊದಿದವರಲ್ಲಿ ಅವನೇ ಮೊದಲಿಗ. ಪಂಪಾದಿ ಕವಿಗಳ ಶೈಲಿ ಬರಬರುತ್ತ ಸಕ್ಕದ ಕನ್ನಡಗಳ ಕಲಬೆರಕೆಯಾಗಿ ಬೆಳೆಯತೊಡಗಿತ್ತು: ಬತ್ತ ಮೊಸರು ಕಲಸಿದಂತೆ ಹದಗೆಟ್ಟು ಹೋಗಿತ್ತು. ಕನ್ನಡ ಬರೆಯ ಹೋಗಿ ಸಂಸ್ಕೃತ ಸೇರಿಸುವ ರೂಢಿ ಹೆಚ್ಚಾಗಿತ್ತು. ಅದನ್ನು ಕಂಡ ನಯಸೇನ ಅಂತಹ ಶೈಲಿಯನ್ನು ವಿಡಂಬಿಸಿದ :

ಪೊಸಗನ್ನಡದಿಂ ವ್ಯಾವ
ರ್ಣಿಸುವೆಂ ಸತ್ಕೃತಿಯುಮೆಂದು ಕನ್ನಡಮುಂ ಚಿಂ
ತಿಸಿ ಕೂಡಲಾಱದಕ್ಕಟ
ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ ॥

ಜೀವಂತ ಕನ್ನಡದೊಡನೆ ವಿಸುಕಾಡದ ಸಕ್ಕದವನ್ನು ಕೂಡಿಸಿ ಬರೆಯುವವನು ಕವಿಯೇ ಅಲ್ಲವೆಂದು ಆತನ ಅಭಿಪ್ರಾಯ. ಸಂಸ್ಕೃತದಲ್ಲಿ ಹೇಳುವದಾದರೆ ಸಂಸ್ಕೃತದಲ್ಲಿಯೇ ಹೇಳಿರಿ; ಕನ್ನಡದಲ್ಲಿ ಬರೆಯುವುದಾದರೆ ಕನ್ನಡದಲ್ಲಿಯೇ ಬರೆಯಿರಿ. ಸುದ್ಧಗನ್ನಡದೊಳು ಸಕ್ಕದವನ್ನು ತಂದಿಕ್ಕುವುದು ತುಪ್ಪದಲ್ಲಿ ಎಣ್ಣೆಯನ್ನು ಬೆರೆಸಿದಂತೆ. ಬಿಸಿಗೂಳಿನೊಡನೆ ಹಸಿಗೂಳು ಬೆರಸಿದಂತೆ. ಅದು ಬಾಯಿಗೂ ರುಚಿಯಲ್ಲ, ಹೊಟ್ಟೆಗೂ ಹಿತ ವಲ್ಲ. ಕನ್ನಡಿಗರ ಹೊಟ್ಟೆ ಕೆಡಬಾರದೆಂದೇ ಈ ಮಾತು ಹೇಳಿ ದ್ದಾನೆ ನಯಸೇನ. ಆತನಿಗೆ ಸಂಸ್ಕೃತ ಸಾಕಷ್ಟು ಗೊತ್ತಿತ್ತು: ಆ ಭಾಷೆಯ ಮೇಲೆ ಸಾಕಷ್ಟು ಪ್ರಭುತ್ವವೂ ಇತ್ತು. ಆದರೆ ಕ್ಲಿಷ್ಟ ಸಂಸ್ಕೃತ ಶಬ್ದಗಳನ್ನು ಅವನು ಎಂದೆಂದೂ ಬಳಸಲಿಲ್ಲ. ದಿನಬಳಕೆಯ ಸಂಸ್ಕೃತ ಶಬ್ದಗಳನ್ನು ಕನ್ನಡದಲ್ಲಿ ಕೂಡಿಸಲು ಅವನೆಂದೂ ಮರೆಯಲಿಲ್ಲ. ಒಟ್ಟಿನಲ್ಲಿ ಜನಸಾಮಾನ್ಯರಿಗೂ ತಿಳಿಯುವಂತೆ ಬರೆಯಬೇಕಾದುದು ಅಗತ್ಯವೆಂದೇ ಅವನ ಅಭಿಮತ.

ನಯಸೇನನ ಶೈಲಿ ಸರಳ, ಸುಮಧುರ, ಧರ್ಮಾಮೃತ ಹೆಸರಿಗೆ ಚಂಪು. ಚಂಪುವಿನ ಆಡಂಬರ ಅಲ್ಲಿಲ್ಲ; ಸರಳ ಶೈಲಿ, ಸಹಜ ರೀತಿ, ಸಾಮಾನ್ಯರಿಗೂ ತಿಳಿಯುವಂತೆ ಹೇಳುವುದೇ ಆತನ ಕಾವ್ಯದ ಗುರಿ. ಆದ್ದರಿಂದ ದೇಸಿಯೇ ಅವನ ಕಾವ್ಯ ಮಾರ್ಗ. ಅವನ ಗದ್ಯವಂತೂ ದೇಸಿಯ ದೇಸಿ. ಕಾವ್ಯದ ತುಂಬಾ ಹೋಲಿಕೆಗಳು; ಆ ಹೋಲಿಕೆಯ ಮೇಲೆ ಹೋಲಿಕೆ; ಒಂದು ಹೋಲಿಕೆಗೆ ಇನ್ನೊಂದು ಹೋಲಿಕೆ. ಒಟ್ಟಿನಲ್ಲಿ ಕಾವ್ಯದ

ತುಂಬೆಲ್ಲ ದೃಷ್ಟಾಂತದ ಸುರಿಮಳೆ. ಒಂದಕ್ಕಿಂತ ಇನ್ನೊಂದು ಸುಂದರ; ಅನುಭಾವ ಬಂಧುರ. ನಿತ್ಯಜೀವನವನ್ನು ನಯಸೇನನ ಒಳಗಣ್ಣು ಪರಿಪರಿಯಾಗಿ ನೋಡಿದೆ; ತಿರುಳನ್ನು ಕಂಡಿದೆ, ನಿತ್ಯಸತ್ಯವನ್ನು ಅರಿತಿದೆ. ಹೀಗಾಗಿ ಅವನ ಶೈಲಿ ಸುದ್ಧಗನ್ನಡದ್ದಾಗಿದೆ; ಸಹಜ ಸುಭಗವೆನಿಸಿದೆ. ನಾಣ್ಣುಡಿ, ದೇಸಿವೆತ್ತ ನುಡಿ, ಧರ್ಮಾಮೃತದ ಸೂಳ್ನುಡಿ. ಕವಿ ಜೀವನಚಿತ್ರವನ್ನು ಕೊಡುವುದೇ ಒಂದು ಸೋಜಿಗ ! ಬಸದಿಯ ಮೂಲೆಯಲ್ಲಿ ಕುಳಿತು ಇಷ್ಟೆಲ್ಲ ಹೇಗೆ ಅರಿತನೋ ಎನಿಸದೆ ಇರದು.

ಧರ್ಮಾಮೃತದಲ್ಲಿ ಕಲಾದೃಷ್ಟಿಯೊಡನೆ ಜನತಾದೃಷ್ಟಿಯೂ ಕೂಡಿದೆ. ಸನ್ನಿವೇಶ, ಪಾತ್ರ, ಶೈಲಿ-ಎಲ್ಲೆಲ್ಲಿಯೂ ಇವೆರಡು ದೃಷ್ಟಿಗಳ ಸಂಗಮವನ್ನು ಕಾಣುತ್ತೇವೆ. ಕಾವ್ಯದೃಷ್ಟಿಯಲ್ಲಿ ರಸಗಂಗೆ ಧುಮ್ಮಿಕ್ಕುವುದನ್ನು ಅರಿಯುತ್ತೇವೆ. ಈತನ ಪ್ರತಿಯೊಂದು ಕಥೆಯಲ್ಲಿಯೂ ಕಲಾಕೌಶಲ್ಯವಿದೆ, ಜನತಾ ಪ್ರಜ್ಞೆಯಿದೆ, ಹಾಸ್ಯದ ಹೊಳಪಿದೆ. ಚಂದ್ರನಲ್ಲಿ ಕಳಂಕವಿರುವಂತೆ ಕಲೆಯ ಮೇಲೆ ಮತೀಯ ಮುಸುಕ ಬಿದ್ದದ್ದು ಸುಳ್ಳಲ್ಲ. ಪ್ರಚಾರದ ಹುಚ್ಚು ಹಿಡಿದರೆ ಕಲೆಗೆ ಕುಂದು ಬಾರದಿರದು; ಇದರಲ್ಲಿ ಅದೆಲ್ಲ ಬಂದಿದೆಯೆಂದು ಬಾಯಿಂದ ಹೇಳಲೇಕೆ ? ಧರ್ಮಾಮೃತವನ್ನು ಓದಿದವರು ತೀರ್ಮಾನಿಸಬೇಕಾದ ವಿಷಯವದು.

**ಕವಿಯ ಕಾಲಮಹಿಮೆ :**

ಹತ್ತನೆಯ ಶತಮಾನದಲ್ಲಿ ಉನ್ನತ ಶಿಖರಕ್ಕೆ ಮುಟ್ಟಿದ ಜೈನಧರ್ಮವು ನಯಸೇನನ ಕಾಲಕ್ಕೆ ಇಳಿಮುಖವಾಗುತ್ತ ನಡೆ

ದಿತ್ತು. ಅನ್ಯಧರ್ಮಗಳು ತಲೆಯೆತ್ತತೊಡಗಿದ್ದವು. ಧರ್ಮ ಧರ್ಮಗಳಲ್ಲಿ ಸೆಣಸಾಟ ಸಾಕಷ್ಟು ನಡೆದಿರಬೇಕು, ಈ ಕಾಲದಲ್ಲಿ ಜೈನರು ತಮ್ಮ ಧರ್ಮವನ್ನು ಉಳಿಸಿಕೊಳ್ಳುವುದಕ್ಕಾಗಿ ಬಹುಮುಖ ಪ್ರಯತ್ನ ಮಾಡಿದಂತಿದೆ. ಇದಕ್ಕೆ ನಿದರ್ಶನ ಆ ಕಾಲದಲ್ಲಿ ಜನಿಸಿ ಬಂದ ಜೈನಸಾಹಿತ್ಯ. ಪರಧರ್ಮವನ್ನು ಅಲ್ಲಗಳೆದು ತಮ್ಮ ಧರ್ಮವೇ ಶ್ರೇಷ್ಠವೆಂದು ಹೇಳುವುದೇ ಅಂದಿನ ಜೈನಕವಿಗಳ ಗುರಿಯಾಗಿದೆ. ನಯಸೇನನ ಧರ್ಮಾಮೃತ, ಬ್ರಹ್ಮಶಿವನ (ಕ್ರಿ.ಶ.೧೧೨೫) ಸಮಯ ಪರೀಕ್ಷೆ, ವೃತ್ತವಿಲಾಸನ (ಕ್ರಿ.ಶ. ೧೧೬೦) ಧರ್ಮಪರೀಕ್ಷೆ ಈಮಾತಿಗೆ ಉತ್ತಮ ನಿದರ್ಶನಗಳಾಗಿವೆ. ಈ ಕವಿಗಳ ಕೃತಿಗಳಲ್ಲಿ ಪಂಪನ ಮಹೋನ್ನತಿ ಇಲ್ಲ; ರನ್ನನ ಪಾಂಡಿತ್ಯವಿಲ್ಲ; ಪೊನ್ನನ ವೈಸಿರಿಯಿಲ್ಲ. ಪರಮತ ವಿಡಂಬನೆ ಮಾತ್ರ ಹೆಚ್ಚು ಹರಿತವಾಗಿ ಬಂದುದನ್ನು ಕಾಣುತ್ತೇವೆ. ನಯಸೇನನಲ್ಲಿ ಚಿಗುರೊಡೆದ ಪರಮತ ವಿಡಂಬನೆ ಬ್ರಹ್ಮಶಿವನಲ್ಲಿ ಹೂತುಕಾತು ವೃತ್ತವಿಲಾಸನಲ್ಲಿ ಫಲಭರಿತ ವೃಕ್ಷವಾಗಿ ನಿಂತುದು ಸುಳ್ಳಲ್ಲ. ಈ ಕವಿಗಳ ಕಾವ್ಯಭಾವ ಸರಳ, ಬಂಧ ಸುಂದರ; ಆದರೆ ನಾಲಿಗೆ ಮಾತ್ರ ಹರಿತ. ಎದುರಾಳಿಯನ್ನು ಮಾತಿನಲ್ಲಿಯೇ ಇರಿಯುತ್ತಾರೆ. ನಗೆಯನ್ನು ಹರಿಸಿ, ಪರರು ಬಾಯಿಮುಚ್ಚಿಕೊಂಡು ಸುಮ್ಮನಿರುವಂತೆ ಕಥೆ ಹೇಳುತ್ತಾರೆ. ನಿರ್ದಯವಾಗಿ, ನಿರ್ದಾಕ್ಷಿಣ್ಯವಾಗಿ, ನಿರ್ಭಯವಾಗಿ ಪರಮತ ವಿಡಂಬನೆ ಮಾಡುವುದೇ ಇವರ ಕಾಯಕ. ಇವರ ವಿಡಂಬನೆಯ ಅಂತರಾಳದಲ್ಲಿ ಹಾಸ್ಯದ ಮಿಂಚು ಹೊಳೆಯದೆ ಹೋಗಿಲ್ಲ. ಅದರ ಬೆಳಕಿನಲ್ಲಿ ಬೈಗುಳದ ಕತ್ತಲೆ ಓಡಿಬಿಡುತ್ತದೆ. ಆಗ

ಇವರ ಕೈಯಲ್ಲಿ ಬೈಸಿಕೊಳ್ಳುವುದೂ ಹಿತವೆನಿಸದೆ ಇರದು.

ಧಾರ್ಮಿಕ ವಿಡಂಬನೆಯೇ ಈ ಕವಿಗಳ ಗುರಿಯಾಗಿದೆ. ಆದರೂ ಅಲ್ಲಲ್ಲಿ ಸಾಮಾಜಿಕ ವಿಡಂಬನೆಗೂ ಇವರು ಅವಕಾಶ ತಂದುಕೊಟ್ಟಿದ್ದಾರೆ. ಈ ವಿಡಂಬಕತ್ರಯರಲ್ಲಿ ನಯಸೇನ ಎಲ್ಲಂದದಿಂದಲೂ ಮೇಲುಮಟ್ಟದ ಕವಿಯೆನಿಸುತ್ತಾನೆ. ಕಥೆ ಹೇಳುತ್ತಲೇ ಸ್ವಧರ್ಮಪ್ರಶಂಸೆಯನ್ನೂ ಪರಮತ ದೂಷಣೆಯನ್ನೂ ಲೀಲಾಜಾಲವಾಗಿ ಮಾಡಿಬಿಡುತ್ತಾನೆ. ಖಂಡನೆಯು ಗಾಯ ಹೆಚ್ಚಾಗದಂತೆ ನಗೆಯ ಲೇಪನವನ್ನು ಬಳಸುತ್ತಾನೆ. ಆತನ ವಿಡಂಬನೆ ಬುದ್ಧಿಪೂರ್ವಕ ಬರುವುದೇನೊ ನಿಜ; ಆದರೆ ಅಲ್ಲಿ ವಿವೇಚನೆಗೆ ಸ್ಥಾನ ಇಲ್ಲದಿಲ್ಲ. ಇತಿಮಿತಿಯನ್ನು ಕಾಣುವುದಾದರೆ ಆತನ ಕೃತಿಯಾದ ಧರ್ಮಾಮೃತವನ್ನೇ ಓದಬೇಕು. ಟೊಳ್ಳುಗಟ್ಟಿಯನ್ನು ಪರೀಕ್ಷೆ ಮಾಡಿ ಅರಿಯಬೇಕು. ಧರ್ಮಪ್ರಸಾರದ ಮಬ್ಬಿನಲ್ಲಿ ಕವಿಯೇ ಅನೇಕ ಸಲ ಎಡವಿದುದನ್ನು ತಿಳಿಯಬೇಕು. ನಯಸೇನ ಬರೆದುದು 'ಧರ್ಮಾಮೃತ'ವಾಯಿತು ಜೈನರಿಗೆ; ವಿಡಂಬನಾಮೃತವೆನಿಸಿತು ರಸಿಕರಿಗೆ. ಪರಧರ್ಮಾನುಯಾಯಿಗಳಿಗೆ ಮಾತ್ರ ಅದು ಜೇಳಿನಕೊಂಡಿಯಾಗಿ ಪರಿಣಮಿಸಿರಬೇಕು. ಕವಿಯ ಮಾತಿನ ಇರಿತಕ್ಕೆ ಸಿಕ್ಕು ತಬ್ಬಿಬ್ಬಾದ ಆ ವ್ಯಕ್ತಿಗಳನ್ನು ಕಂಡು ಅಳಬೇಕೊ ನಗಬೇಕೊ ತಿಳಿಯದು. ಪಾತ್ರ, ಸನ್ನಿವೇಶ ಹಾಗೂ ಶೈಲಿ—ಇವುಗಳ ತಾರತಮ್ಯದಲ್ಲಿ ಹುಟ್ಟಿಬರುವ ಹಲವಾರು ಮಾದರಿಯ ವಿಡಂಬನೆಯ ಪ್ರಕಾರಗಳನ್ನು ಈತನ ಕೃತಿಯಲ್ಲಿ ಕಾಣಬಹುದು. ಪ್ರತಿಯೊಂದು ಕಥೆಯಲ್ಲಿಯೂ ವಿಡಂಬನೆ ಇದೆಯೆಂದು ಹೇಳಲಿಕ್ಕಾಗದು. ಮತ್ತು ವಿಡಂಬನೆ

ಯಿಂದ ತುಂಬಿದ ಎಲ್ಲ ಕಥೆಗಳನ್ನೂ ಇಲ್ಲಿ ವಿಸ್ತರಿಸಿ ಹೇಳಲೂ ಸಾಧ್ಯವಿಲ್ಲ. ಸ್ಥಳ, ವೇಳೆಗೆ ಗಮನ ಕೊಡಲೇಬೇಕಾಗಿದೆ. ಮಹತ್ವದ ಘಟ್ಟಗಳನ್ನು ಅವಲೋಕಿಸಿ ವೈವಿಧ್ಯಪೂರ್ಣವಾಗಿ ಬಂದಿರುವ ನಗೆಯ ಪ್ರವಾಹವನ್ನು ಗುರುತಿಸುವ ಪ್ರಯತ್ನ ಇಲ್ಲಿ ನಡೆಯಬೇಕಾಗಿದೆ.

**ಸೇರಿಗೆ ಸವ್ವಾಸೇರು :**

ಸೌರಾಷ್ಟ್ರದೇಶದ ರಾಜಧಾನಿ ಗಿರಿನಗರ. ಅಲ್ಲಿ ದಯಾಮಿತ್ರಸೆಟ್ಟಿ ಎಂಬುವ ಒಬ್ಬ ದೊಡ್ಡ ವ್ಯಾಪಾರಿ ಇದ್ದನು. ದುಡ್ಡು ಎಷ್ಟಿದ್ದರೂ ಗಳಿಸಬೇಕೆಂಬುದೇ ವ್ಯಾಪಾರಿಯ ಧರ್ಮ. ಒಮ್ಮೆ ಆತನು ಭಾಂಡವನ್ನು ತುಂಬಿಕೊಂಡು ಪ್ರವಾಸಕ್ಕೆ ಸಿದ್ಧನಾಗಿ ನಿಂತ. ಆ ಹೊತ್ತಿಗೆ ವಸುಭೂತಿ ಎಂಬ ಬ್ರಾಹ್ಮಣನು ದಯಾಮಿತ್ರಸೆಟ್ಟಿ ಇದ್ದಲ್ಲಿಗೆ ಬಂದು ತಾನೂ ಅವನ ಜೊತೆಗೆ ಹೊರಡುವುದಾಗಿ ತಿಳಿಸಿದ. ಸೆಟ್ಟಿ ಆಗಲೆಂದ. ವಸುಭೂತಿ ಮಹಾಪ್ರಾಜ್ಞ; ಹೇಗಾದರೂ ಹೋಗಿ ಗಂಗಾಸ್ನಾನ ಮಾಡುವ ಮನಸ್ಸು ಅವನಿಗೆ. ಮಾರ್ಗ ಮಧ್ಯದಲ್ಲಿ ಕಾಡುಮೃಗಗಳ, ಕಳ್ಳಕಾಕರ ತೊಂದರೆಗೆ ಅಂಜಿ, ಆತನು ದಯಾಮಿತ್ರಸೆಟ್ಟಿಯ ಬೆನ್ನು ಹತ್ತುತ್ತಾನೆ, ಪಯಣ ಸಾಗಿತು. ವಸುಭೂತಿಯ ಕೊರಳ ಜನಿವಾರ, ಹಣೆಯ ಮೇಲಿರುವ ನಾಮ, ಬೆರಳ ದರ್ಭೆ, ಕಾಷಾಂಬರ ನೋಡಿ ತೀಡಿಕೆಯ ಮಾತು ಕೇಳಿ ಸೆಟ್ಟಿಗೆ ಒಳಗೊಳಗೆ ನಗು. ದಯಾಮಿತ್ರಸೆಟ್ಟಿಯ 'ಧರ್ಮ ಶ್ರವಣವಿಲ್ಲದೆ ಊಟಮಾಡೆನು' ಎಂಬ ವ್ರತವನ್ನು ಕಂಡು ವಸುಭೂತಿಗೆ ಹೊಟ್ಟೆತುಂಬಾ ನಗು. ಅವರಿಬ್ಬರ ನಡುವಳಿಕೆ ಬತ್ತ ಮೊಸರು ಕಲಸಿದಂತೆ. ಒಂದು ದಿವಸ, ವಸುಭೂತಿ ಸುಮ್ಮನಿರಲಾರದೆ "ಸೆಟ್ಟರೆ, ವಸ್ತ್ರವಿಲ್ಲದವರನ್ನು [illegible] [illegible] ಕೇಳಿದ್ದೇನೆ.

ನಿಮ್ಮಂತಹ ಜಾಣವರ್ತಕ ಇನ್ನೊಬ್ಬನಿಲ್ಲ. ಹೀಗಿದ್ದರೂ ತಾವು ಶ್ರವಣರ ಮಾತಿಗೆ ಮರುಳ್ಗೊಂಡುದು ಅತ್ಯಾಶ್ಚರ್ಯ. ಮಲಬದ್ಧರಾಗಿ, ನಾಚಿಕೆಗೆಟ್ಟು, ದಿಗಂಬರವನೇ ತೊಟ್ಟು, ಹಲ್ಲು ಉಜ್ಜದೆ, ಕನಸಿನಲ್ಲಿಯೂ ಸ್ನಾನ ಮಾಡದೆ ಇರುವ ಜಾತಿಗೆಟ್ಟ ಜಿನಮುನಿಗಳನ್ನು ನಂಬುವುದೇ?" ಎಂದು ತಿರಸ್ಕಾರದ ನಗೆ ಬೀರಿದನು. ಆಗ ಸೆಟ್ಟಿ ಪಿಟ್ಟೆನ್ನಲಿಲ್ಲ. ನಗುವವನ ಕೂಡ ನಕ್ಕು ಬಿಟ್ಟ; ಸಮುದ್ರವನ್ನು ಕಾಣದ ಕಪ್ಪೆಗೆ ತಾನಿದ್ದ ಕೊಳಚೆಯೇ ಕಡಲು ಎನ್ನುವಂತಿದ್ದ ಆ ಬಡಗು ಬ್ರಾಹ್ಮಣನಿಗೆ ಬುದ್ಧಿ ಕಲಿಸುವೆನೆಂದು ಸುಮ್ಮನಾದ.

ದಿನಗಳಿದುವು. ಒಮ್ಮೆ ಸೆಟ್ಟಿ ವಸುಭೂತಿಯನ್ನು ಮರ್ಯಾದೆಪೂರ್ವಕ ಕರೆದು, ಉನ್ನತ ಪೀಠದಲ್ಲಿ ಕೂಡ್ರಿಸಿ, ಹೊಗಳಿ ಮಾತನಾಡಿಸಿದ. ವಸುಭೂತಿ ಉಬ್ಬಿ ಕುಂಬಳಕಾಯಿಯಾದ. ಸೆಟ್ಟಿ ಮಾತು ಮುಂದುವರಿಸಿದ : "ನನ್ನದೊಂದು ವ್ರತವಿದೆ; ಪ್ರತಿವರ್ಷ, ಈ ಸಮಯಕ್ಕೆ ಜಿನೇಶ್ವರ ಸಾಕ್ಷಿಯಾಗಿ ಮಹರ್ಷಿಗಳನ್ನು ಮುಂದಿಟ್ಟುಕೊಂಡು ಈ ನೋಂಪಿಯನ್ನು ನಡೆಸುತ್ತ ಬಂದಿದ್ದೇನೆ, ತಾವು ಅದನ್ನು ನಡೆಸಿಕೊಡಬೇಕೆಂದು ಪ್ರಾರ್ಥನೆ. ಕುಲಶೀಲಗಳಲ್ಲಿ ಮೇಲೆನಿಸಿ ಭೂಲೋಕ ಸ್ತುತ್ಯರಾದ ಮಹಾನುಭಾವರು ತಾವೇ ಇದ್ದಾಗ ಅನ್ಯ ಋಷಿಗಳ ಮಾತೇಕೆ? ತಾವು ದಯವಿಟ್ಟು ನೋಂಪಿಯನ್ನು ನಡೆಸಿಕೊಟ್ಟರೆ ಬೇಡಿದಷ್ಟು ಧನಕನಕ ಕೊಡುತ್ತೇನೆ." ದುಡ್ಡು ಎಂದೊಡನ ವಸುಭೂತಿಯ ಕಿವಿ ನಿಗುರಿದುವು. ಹಣ ಸಿಕ್ಕರೆ ಏನು ಮಾಡುವುದಕ್ಕೂ ಸಿದ್ಧ ವಸುಭೂತಿ. ದಯಾಮಿತ್ರಸೆಟ್ಟಿ ಆನಂದಭರಿತನಾಗಿ "ವ್ರತವೇನೂ ದೊಡ್ಡದಿಲ್ಲ. ಅದು ಮುಕ್ತಾಯಗೊಳ್ಳುವ ಪರ್ಯಂತ [illegible]

ಕೂಳನ್ನೂ ತಿಳಿದುಪ್ಪವನ್ನೂ ಹಾಕಿದಷ್ಟು ಮೌನವಾಗಿಯೇ ತಿಂದು ಮುಗಿಸಬೇಕು. ಮರುದಿವಸ, ಆ ಹೊತ್ತಿಗೆ ಅದೇ ಊಟ. ನಡುನಡುವೆ ಏನನ್ನೂ ಮುಟ್ಟಬಾರದು; ನೀರನ್ನು ಮಾತ್ರ ಕನಸಿನಲ್ಲಿಯೂ ನೆನೆಯಬಾರದು. ಹಗಲಿರುಳೂ ಕುಳಿತ ಸ್ಥಳದಲ್ಲಿಯೇ ಇದ್ದು ಸದಾ ಓದುತ್ತಿರಬೇಕು. ನೋಂಪಿಯ ಆರಂಭದಲ್ಲಿ ತಲೆಗೂದಲನ್ನು ಕೀಳಿಸಿಕೊಂಡು ಮೈಮೇಲೆ ಬಟ್ಟೆಯಿಲ್ಲದೆ ಇರಬೇಕು. ಹೀಗೆ ಎರಡು ತಿಂಗಳು ಕಳೆದರೆ ಸಾಕು. ವ್ರತ ಸಮಾಪ್ತಿಯಾಗುವುದು. ಆಗ ತಮಗೆ ಬೇಡಿದಷ್ಟು ಸಂಪತ್ತು, ಮಾನಮರ್ಯಾದೆ" ಎಂದು ವ್ರತನಿಯಮವನ್ನು ವಿವರಿಸಿದನು. "ಇದೇನು ಮಹಾ ? ಹೊಟ್ಟೆಗೆ ಭೋಜನ, ಕೈತುಂಬ ದಕ್ಷಿಣೆ ಸಿಕ್ಕರೆ ಸಾಕಲ್ಲವೆ? ತಲೆ ಬೋಳು, ಬತ್ತಲೆ ಮುಂತಾದುವನ್ನು ನೋಡುವವರು ಇಲ್ಲಿ ಯಾರಿದ್ದಾರೆ ? ಹಣ ಕೈಗೆ ಬರುವಾಗ ಕೈಬಿಟ್ಟವನು ಮೂಢನಲ್ಲವೆ ?" ಎಂದು ಯೋಚಿಸಿ ವ್ರತಕ್ಕೆ ಅಣಿಯಾದ ಆ ಮಹಾನುಭಾವ.

ವ್ರತಪ್ರಾರಂಭದಲ್ಲಿ ತಲೆಗೂದಲನ್ನು ಕಿತ್ತುಕೊಳ್ಳಬೇಕು. ವಸುಭೂತಿ ಉತ್ಸಾಹದಿಂದ ಮಣೆಯ ಮೇಲೆ ಕುಳಿತುಕೊಂಡ. ಇಬ್ಬರು ಮಡಿಗರು ಆ ಕಡೆ, ಈ ಕಡೆ ನಿಂತು ಕೂದಲನ್ನು ಎಣೆ ಎಣಿಸಿ ಕೀಳತೊಡಗಿದರು. ಅದೆಂತಹ ವೇದನೆ? ಒಂದೆರಡು ಕೂದಲು ಚರ್ಮದಿಂದ ಹೊರಬರುವಷ್ಟರಲ್ಲಿಯೇ ವಸುಭೂತಿ ತಲೆಯನ್ನು ಹೊರಳಾಡಿಸುತ್ತ ಶುಂಠಿಯನ್ನು ತಿಂದ ಮಂಗನಂತೆ ಉಮ್ಮಳಿಸಿ ಕಳವಳಪಟ್ಟನು. ಅವನ ನೋವಿಗೆ ಶರೀರ ನಡುಗತೊಡಗಿತು. ಹಲ್ಲು ಗಿಡಿಗಿರಿದು ಜುಮ್ಮೆಂದುವು. ಎದೆ ಗೂಡು

ಬಡೆದವನಂತೆ ತನ್ನೊಡನೆ ತಾನೇ ಮಾತಾಡಿಕೊಂಡ. ನೀರಿನ ದಗೆ ಹೆಚ್ಚಾಗಿ ಗಾಳಿಗೆ ಬಾಯೊಡ್ಡಿದ ಕಪ್ಪೆಯಂತೆ ತಂಪಾದ ಸ್ಥಳ ಹುಡುಕಿದ. ಹಲ್ಲಿಯಂತೆ ಗೋಡೆಯನ್ನು ಏರಲೆತ್ನಿಸಿದ. ಎಲೆ ವಳ್ಳಿಯಂತೆ ಕಂಬವನ್ನೇ ಸುತ್ತುಹಾಕಿದ. ವೃದ್ಧನಂತೆ ನಡೆದಾಡಿದ. ಕುಡುಕನಂತೆ ಕೂಗಾಡಿದ. ಹೆಚ್ಚೇನು ಹೇಳುವುದು ? ಚೊಚ್ಚಲು ಬಸುರಿ ಹಡೆವಂತೆ ತೊಳಲಾಡಿದ. ಕೊನೆಗೊಮ್ಮೆ ಕಣ್ಣಲ್ಲಿಯೇ ಬೆಳಗಾಯಿತು. ನೀರಿಲ್ಲದೆ ಅಸು ನಿಲ್ಲಲಾರದು ಎನಿಸಿತು. ಈ ಸ್ಥಿತಿಯಲ್ಲಿ ನೋಂಪಿಯನ್ನು ನಿಲ್ಲಿಸಬಹುದೆ? ಅದು ಕೊನೆಗೊಂಡರಲ್ಲವೆ ಹಣ ಸಿಗುವುದು ? ಒಂದೆರಡು ದಿವಸ ವಸುಭೂತಿ ಉಂಡುಂಡು ಒದ್ದಾಡಿದ; ಒದ್ದಾಡುತ್ತಲೇ ಉಂಡ.

ಅಮೃತದಂತಿದ್ದ ಭಕ್ಷ್ಯ ವಸುಭೂತಿಗೆ ಓಕರಿಕೆ ಎನಿಸಿತು. ಹಾಲು ಎಂದರೆ ಹಾರಿಬಿದ್ದ: ತುಪ್ಪವೆಂದರೆ ಬೆಪ್ಪನಾದ, ನೀರಡಿಕೆಯ ನೋವನ್ನು ತಾಳಲಾರದೆ, ಊಟಕ್ಕೆ ಬಡಿಸುವುದೇ ಬೇಡವೆಂದು ಬೇಡಿಕೊಂಡ. ಸೆಟ್ಟಿಯೂ ಅತನಿಗೆ ಬೇಡಿಕೊಳ್ಳದೆ ಇರಲಿಲ್ಲ. "ನಾನು ಮೊದಲೇ ತಿಳಿಸಿದಂತೆ ನೀಡಿದ್ದನ್ನು ಬೇಡೆನ್ನದೆ ಮೌನದಿಂದ ಉಣಬೇಕು. ತಾವು ಗುಣವಂತರು, ಕುಲದೊಡೆಯರು ತಪ್ಪದೆ ನೋಂಪಿಯನ್ನು ನಡೆಸಿಕೊಡಬೇಕು. ನಮ್ಮಲ್ಲಿರುವ ಸಾಮಾನ್ಯ ಋಷಿಗಳು ಸಹ ನಾವು ಹೇಳಿದಂತೆ ಸುಮ್ಮನೆ ಸುಖವಾಗಿ ಉಣ್ಣುತ್ತಾರೆ. ಸತ್ಕುಲಜರಾದ ಭೂದೇವರೆನಿಸಿದ ತಮಗೆ ಇದೇನು ಅಸಾಧ್ಯ ?" ಸೆಟ್ಟಿಯ ಒಂದೊಂದು ನುಡಿ ವಸುಭೂತಿಯ ಬೆಂದ ಒಡಲಿಗೆ ಬರೆಹಾಕಿದಂತೆ ಆನಿಸಿತು. ಕೈಯೊಳು ತಿಂಬುದು ಕಷ್ಟವೆನಿಸಿತು. ಬತ್ತಲೆ ಇರುವುದು

ಸಾಕೆನಿಸಿತು. ಆದರೂ ಕೊನೆಯ ದಿನ, ಬರಬಹುದಾದ ದಕ್ಷಿಣೆಯನ್ನು ನೆನೆದು ಸೋಂಪಿಯ ನಿಯಮಗಳನ್ನು ಬಲು ಕಷ್ಟದಿಂದ ಪಾಲಿಸುತ್ತ ನಡೆದ.

ಎಂಟು ದಿವಸ ಕಳೆದವು. ನಸುಗುನ್ನಿ ಮುಟ್ಟಿದಂತೆ ಮೈ ತಿಂಡಿ ಬಿಟ್ಟುದು; ತುರಿಸಿಕೊಳ್ಳುವುದೇ ವಸುಭೂತಿಗೆ ಉದ್ಯೋಗವಾಯಿತು. ಕೆರೆದುಕೊಳ್ಳಲು ಎರಡೂ ಕೈ ಸಾಲದಾದುವು. ಕಾಲಿಂದ ತುರಿಸಿಕೊಳ್ಳುವ ಮನಸ್ಸಾದರೂ ಕಾಲು ಕಂಗಾಲಾದುವು. ಭೂತಗಳಂತೆ ಕೆರೆದುಕೊಳ್ಳುತ್ತ ಬದ್ಧಿಯಿಲ್ಲದವರಂತೆ ವರ್ತಿಸತೊಡಗಿದ. ವಸುಭೂತಿಯ ದೇಹ ಕಡು ಬಡವಾಗತೊಡಗಿತು. ಗಾಳಿಗೊಡ್ಡಿದ ಸೊಡರಿನಂತೆ ನಡುಗಿತು. ಪಟದ ಸೀರೆಯಂತೆ ಅಲ್ಲಾಡಿತು. ವಸುಭೂತಿಗೆ ದಿಕ್ಕೇ ತೋಚದಾಯಿತು. ಮಠದ ಬೆಕ್ಕಿನಂತೆ ಒಳಗೊಳಗೆ ಓಡಾಡತೊಡಗಿದ. ಗರ್ಭಿಣಿಯಾದ ರಂಡೆಯಂತೆ ಬಾಯಿಬಿಡುತ್ತ, ಜಗಳಗಂಟಿಯಂತೆ ಮಿಡುಮಿಡನೆ ಮಿಡುಕಾಡಿದ. ಬೇಸಗೆಯ ಕೋಣನಂತೆ ನಾಲಿಗೆಯನ್ನು ಹೊರಚಾಚಿ ಬಿದ್ದುಕೊಂಡ. ಬಯಲೊಳಗೆ ಹಾಕಿದ ಮೀನದಂತೆ ಚಟಪಟನೆ ಒದ್ದಾಡಿದ. ವಸುಭೂತಿಯ ಈ ಸ್ಥಿತಿಗತಿಯನ್ನು ಕಂಡು ನಮ್ಮಲ್ಲಿ ಮರುಕವುಂಟಾದರೂ ನಗೆ ತಡೆಯುವುದಿಲ್ಲ. ವಸುಭೂತಿಗೆ ಸಂತಾಪದ ಮೇಲೆ ಸಂತಾಪವುಂಟಾದುದು ನಮ್ಮ ಮನಕ್ಕೆ ಆನಂದವನ್ನೇ ನೀಡುತ್ತದೆ. ಅನ್ಯರ ಸಾವು ನೋವುಗಳಲ್ಲಿ ಸಂತಸಬಡುವ ಸ್ವಭಾವ ಮಾನವನದು. ಆತನ ದುಡ್ಡಿನ ಮೇಲಿರುವ ಲೋಭ ನಮ್ಮಲ್ಲಿ ಉಂಟಾದ ಮರುಕವನ್ನು ಓಡಿಸಿ, ವಿಕೃತಿಗೆ ಹಾದಿಹಾಕುತ್ತದೆ; ಆಗ ನಮಗೆಲ್ಲ ನಗೆ. ೭

"ಸಿಂಹವನ್ನು ಹಿಡಿದು ಸವಾರಿ ಮಾಡಬಹುದು; ಆದರೆ ಈ ನೋಂಪಿಯನ್ನು ನಡೆಸುವುದು ತನ್ನಿಂದ ಅಸಾಧ್ಯ"ವೆಂದು ವಸುಭೂತಿಗೆ ಮನದಟ್ಟಾಯಿತು. ಹೀಗೆಂದು ಆತ ಸೆಟ್ಟಿಗೆ ಸ್ಪಷ್ಟವಾಗಿಯೇ ಹೇಳಿಬಿಟ್ಟ. ಅದನ್ನು ಕೇಳಿ ಮಯೂರಮಿತ್ರಸೆಟ್ಟಿ ಬಾಯ ತಂಬುಲ ಸೂಸುವಂತೆ ಕಳಕಳಿಸಿ ನಗುತ್ತಾನೆ. ಆತನು ವ್ಯಂಗ್ಯವಾಗಿ

ಕಲಿತನದಿಂದಂ ಲೋಗರ್
ಪುಲಿಯಂ ಪಿಡಿದೊಡನಮೇಂ ಬಿಡುಬುದಾದೊಂ
ದಿಲಿಯಂ ಪಿಡಿದೊಡಮದು ಪೆ
ಬ್ಬುಲಿಯೆಂಬರ್ಜನಂಗಳ್ ತಾನಿದು ಸಹಜಂ ॥
ಕಡುಮೂರ್ಖರ್ ತಮ್ಮಿಚ್ಛೆಗೆ
ಪಿಡಿವರೆ ಪಿಡಿವರ್ ಬಿಣ್ಣ ಜಿನಮಾರ್ಗದೊಳಿಂ
ನಡೆಯಲ್ ಬರ್ಕುಮೆ ಬಾರದು
ಕಡಲೆಗಳಂ ತಿಂಬ ದೊಗ್ಗ ಕಲ್ಗಳೊಳಂತೇ ॥

ಎಂದು ಕೇಳಿ, ಜಿನಮಹರ್ಷಿಗಳ ಮನದ ಧೈರ್ಯ ಯಾರಿಗೂ ಬಾರದೆಂದು ವಸುಭೂತಿಗೆ ತಿಳಿಸುತ್ತಾನೆ. ವಸುಭೂತಿ ಪಿಟ್ಟಿನ್ನದ ಸ್ಥಿತಿಯಲ್ಲಿ "ಪರವರೋಳ್ ಮರುಳಿಲ್ಲ, ಸೂಳೆ ಸಾಧುವಲ್ಲ" ಎಂಬ ಗಾದೆಯಂತೆ ಸೆಟ್ಟಿಯು ಧರ್ಮವೇ ಶ್ರೇಷ್ಠವೆಂದು ಬಗೆದು ಜೈನ ಧರ್ಮವನ್ನು ಸ್ವೀಕರಿಸುತ್ತಾನೆ.

ಈ ದರ್ಶನ ಕಥೆಯ ಮೂಲ ಉದ್ದೇಶ ಜೈನಧರ್ಮವನ್ನು ನಂಬಿ ನಡೆದವರಿಗೆ ಸದ್ಗತಿಯೆಂದು ತಿಳಿಸುವದಾಗಿದೆ. ಅದನ್ನು ಸಾಧಿಸುವುದಕ್ಕೆ ಬೇಕಾದ ಜಾಣ್ಮೆಯನ್ನು ಕವಿ ಈ ಕಥೆಯಲ್ಲಿ ತೋರಿಸಿದ್ದಾನೆ. ಕಥೆ ಚಿಕ್ಕದಾದರೂ ಅದನ್ನು ಬೆಳೆಸಿಕೊಂಡು ಬಂದ ರೀತಿ ಕುತೂಹಲಕಾರಿಯಾಗಿದೆ. ಮಾತು ಮಾತಿಗೆ ಸ್ವಾರಸ್ಯ

ತುಂಬಿ ಬರುತ್ತದೆ. ಕಥೆ ಹಾಸ್ಯಪೂರ್ಣವಾಗಿರುವುದನ್ನು ಎಂತಹರೂ ಒಪ್ಪುತ್ತಾರೆ. ವಸುಭೂತಿಗೆ ಧರ್ಮಕ್ಕಿಂತಲೂ ದುಡ್ಡು ಮಿಗಿಲೆನಿಸಿದೆ. ಅದು ಆತನ ಸ್ವಭಾವದೋಷ. ಅದನ್ನು ಕೀಳಲು ನಯಸೇನ ವಿಡಂಬನೆಯ ಅಸ್ತ್ರವನ್ನೇ ಬಳಸುತ್ತಾನೆ. ಮೂಗಿನೊಳಗಿನ ಕೂದಲನ್ನು ಜಗ್ಗಿದ ನೋವು ಅಶ್ಲೀಲವುದಾದರೂ ಅದು ಮಾಜುವಂತೆ ನಗೆಯ ಔಷಧ ಹಚ್ಚುತ್ತಾನೆ. ಒಟ್ಟಿನಲ್ಲಿ, ಈ ಸನ್ನಿವೇಶವೇ ಹಾಸ್ಯಮಯವಾಗಿದೆ. ತಲೆಗೂದಲನ್ನು ಕೀಳುವ ಚಿತ್ರ, ನೀರಡಿಸಿ ಒದ್ದಾಡುವ ಸನ್ನಿವೇಶ ನಗೆಯ ಸೂತ್ರಗಳು, ಎಲ್ಲ ಮತದಲ್ಲಿಯೂ ಇಂತಹ ಆಸೆಬುರುಕ ವ್ಯಕ್ತಿಗಳಿದ್ದಾರೆ. ವಸುಭೂತಿ ಅಂಥವರ ಮುಖಂಡ. ಅವನನ್ನು ನಗೆಗೀಡುಮಾಡಿದ ನಯಸೇನ ಶುದ್ಧ ನಗೆಗಾರನೆಂದು ಹೇಳಬಹುದಲ್ಲವೆ?

ನಯಸೇನಕವಿಯ ನಗೆಯಲ್ಲಿ ನಯವಿದೆ ವೈವಿಧ್ಯವಿದೆ. ಪ್ರಸಂಗಾನುಸಾರವಾಗಿ ನಗೆಯ ವಿವಿಧ ಬಗೆಗಳನ್ನು ಕಥಾಗರ್ಭದಲ್ಲಿ ತುಂಬಿ ತಾನೂ ನಗುತ್ತಾನೆ, ಅನ್ಯರನ್ನೂ ನಗಿಸುತ್ತಾನೆ. ಆತನ ನಿಶ್ಶಂಕೆಯ ಕಥೆಯನ್ನೇ ಎತ್ತಿಕೊಂಡು, ಅಲ್ಲಿರುವ ನಗೆಯನ್ನು ಅಳೆದು ನೋಡೋಣ :

**ಧೂರ್ತ ವಿನೋದ :**

ಕಾಶ್ಮೀರದೇಶದ ರಾಜಧಾನಿ ವಿಜಯಪುರ. ಅರಿಮಥನನೆಂಬ ರಾಜನು ತನ್ನ ಪಟ್ಟದ ರಾಣಿ, ಸೌಂದರಿಯೊಡನೆ ಸುಖದಿಂದ ರಾಜ್ಯವಾಳುತ್ತಿರುವಾಗ ಅವರ ಉದರದಲ್ಲಿ ಲಲಿತಾಂಗನು ಜನಿಸುವನು. ಆತನು ಶುಕ್ಲಪಕ್ಷದ ಚಂದ್ರನಂತೆ ಬೆಳೆದು ದೊಡ್ಡವ

ನಾಗುವನು.ಮಗನ ಮೇಲಿ ತಂದೆತಾಯಿಗಳ ಮೋಹ ವಿಪರೀತ. ಮಗನ ವಿನೋದವನ್ನೂ, ಮಗನಾಡುವ, ಆಟವನ್ನೂ ಮಗನ ದುರುಕ್ತಿಯನ್ನೂ, ಮಗನ ದೂರ್ತಗಳನ್ನೂ ಕಂಡು ಅವರು ನಗೆಗೂಡಿ ಆನಂದಪಡುವರು. ಲಲಿತಾಂಗ ಏನು ಮಾಡಿದರೂ ಅವರಿಗೆ ಆನಂದ. ಹೀಗಾಗಿ ಆತ ಸ್ವೇಚ್ಛೆಯಿಂದ ನಡೆಯ ತೊಡಗಿದ; ಮನಬಂದಂತೆ ನುಡಿಯುತೊಡಗಿದ. ಪುರಜನರನ್ನೂ, ಪರಿಜನರನ್ನೂ,ನಿರಪರಾಧಿಗಳನ್ನೂ,ಆತ ಹಿಡಿದುಬಡಿದರೆ ತಂದೆ ತಾಯಿ ನೋಡಿ ನಗುವರು. ಹಾಗೆ ಮಾಡಕೂಡದೆಂದು ಮಗನಿಗೆ ಅವರೆಂದೂ ಬುದ್ಧಿ ಹೇಳಲಿಲ್ಲ. ಲಲಿತಾಂಗನು ದಿನಗಳೆಯುತ್ತಲೇ ದುರ್ಜನರ ಸಹವಾಸದಿಂದ ಅತಿ ಚಪಲನಾಗಿಬಿಟ್ಟ, ಅಂಕುಶ ವಿಲ್ಲದ ಮದ್ದಾನೆಯಂತೆ ವರ್ತಿಸತೊಡಗಿದ. ಆದಟು, ಸೊಕ್ಕು, ಜವ್ವನ ಆತನಲ್ಲಿ ಮುಪ್ಪುರಿಗೊಂಡು ನಿಂತವು. ಆಗ ಆತನ ಸ್ವಭಾವವನ್ನು ಕೇಳಬೇಕೆ? ಕೈಗೆ ಸಿಕ್ಕವರನ್ನು ಬಯ್ದು ಪೊಯ್ದು: ಪೊಯ್ದು ಬಯ್ದು. ತಂದೆತಾಯಿ ಮಗನ ಹುಡುಗಾಟವನ್ನು ಕಂಡು ನಗುತ್ತಲೇ ನಡೆದರು. ಲಲಿತಾಂಗನ ನಡೆನುಡಿ ಲಗಾಮಿಲ್ಲದ ಕುದುರೆಯಂತೆ ಸಾಗಿದವು. ಆವನನ್ನು ಕಂಡವರ ಎದೆ ನಡು ಗುತ್ತಿತು 'ಬೆಕ್ಕಿಗೆ ಆಟ ಇಲಿಗಳಿಗೆ ಪ್ರಾಣಸಂಕಟ' ಎನ್ನುವ ಗಾದೆ ದಿಟವೆನಿಸಿತು.

ಲಲಿತಾಂಗನಿಗೆ ಅಸಭ್ಯವಾದುದರಲ್ಲಿಯೇ ವಿನೋದ ಸಿಕ್ಕು ತಿತ್ತೋ ಏನೋ ? ರಾಜನಿಗೆ ಅಂಜಿ, ಅವನ ಕೀಟಲೆಗೆ ಒಳ ಗಾದವರು ಸುಮ್ಮನಿರುತ್ತಿದ್ದರು. ಅದು ಲಲಿತಾಂಗನ ಚಪಲ ಚೇಷ್ಟೆಗೆ ಪುಟಕೊಟ್ಟಂತೆ ಆಯಿತು.ಮದವೇರಿದವನಿಗೆ ಮದ್ಯ

ಣಿಕೆ ತ್ರಿನಿಸಿದಂತೆ ಆತನ ವರ್ತನೆ ಮಿತಿಮೀರಿತು : ಮಿಂಡರನ್ನೂ ಪೆಂಡಿರನ್ನೂ ಹಿಡಿದುತಂದು ಹೂಡಿಯಾಡಿಸಿದರೆ ಅವನಿಗೆ ಸಂತೋಷ. ಪುರದ ಸೂಳೆಯರನ್ನೆಲ್ಲ ಹಿಡಿದುತಂದು ಯಕ್ಷಿಯ ಮುಂದೆಕೂಡ್ರಿಸಿ ನಿದ್ರೆಗೆಡಿಸುವದು ಅವನಿಗೊಂದು ಗೊಡ್ಡಾಟ. ಕೂಡಿದ ಜನ ಘೊಳ್ಳೆಂದು ನಕ್ಕರೆ ಆತನಿಗೆ ಗಹಗಹಿಪ ನಗೆ. ತಿರಿದುಂಬ ತಿರುಕರನ್ನು ಹಿಡಿದು ತರಿಸಿ ಸುಂಕವನ್ನು ಕೊಡು ಯೆಂದು ಪೀಡಿಸುತ್ತಾನೆ. ಗಾಣಿಗರ ಓಣಿಯಲ್ಲಿ ಹೊಕ್ಕು ಗಾಣಿಗ ರನ್ನು ಎಣ್ಣೆಯಲ್ಲಿ ಮುಳುಗಿಸಿ ಮೇಲೆತ್ತುತ್ತಾನೆ. ಮಾಲೆಗಾರರ ಹೂವಿನ ಸಂತೆಯಲ್ಲಿ ಹೊಕ್ಕು ಹೂಮಾಲೆಗಳನ್ನು ಸೂರೆಮಾಡಿ ಮಂಗನಂತೆ ಹಲ್ಲು ಕಿರಿಯುತ್ತಾನೆ;ಅವನ ಗೆಳೆಯರು ಅವನೊಡನೆ ಕರುಳು ಹರಿಯುವಂತೆ ವಿನೋದಗೊಂಡು ನಗುತ್ತಾರೆ.ಹೆಂಡದ ಅಂಗಡಿಯಲ್ಲಿರುವ ಹೆಂಡವನ್ನು ತಂದು ಕಳ್ಳರಿಗೂ ಧೂರ್ತ ರಿಗೂ ಹಂಚಿ ಚಪ್ಪಾಳೆ ಬಾರಿಸುತ್ತಾನೆ. ಇದೆಲ್ಲ ಆತನಿಗೆ ವಿವಿಧ ವಿನೋದ.

ವಿನೋದದ ಒಂದು ಬಗೆ ಗೊಡ್ಡಾಟ, ದುರ್ಜನರ ಸಮೂಹ ದಲ್ಲಿಯೇ ಇದರ ಆಟ. ಲಲಿತಾಂಗನು ತೊತ್ತುಗಳಿಗೆ ದಿವ್ಯಾಭರ ಣಗಳನ್ನು ತೊಡಿಸಿ,ಅವರಿಂದ ದಿವ್ಯಸ್ತ್ರೀಯರನ್ನು ಹೊಡೆದೋಡಿ ಸುತ್ತಾನೆ;ಇದು ಧೂರ್ತವಿನೋದವೆಂಮ ಹೆಸರಾಗಿದೆ.ಇವನನು ಕಂಡರೆ ಜನರು ತೋಳವನ್ನು ಕಂಡ ಕುರಿಗಳಂತೆ ಪಲಾಯನ ಮಾಡುತ್ತಾರೆ. ಓಡುವ ಗಡಿಬಿಡಿಯಲ್ಲಿ ಬೀಳುತ್ತಾರೆ,ಏಳುತ್ತಾರೆ ಮಣ್ಣುಮುಕ್ಕಿ ನಗಿಸಿಕೊಳ್ಳುತ್ತಾರೆ. ಅದೆಲ್ಲ ಲಲಿತಾಂಗನಿಗೆ ಮೋಜಿನ ಜಾತ್ರೆ. ಅಲ್ಲಿದ್ದವರು ನಗುತ್ತಾರೆ. ಮಣಿಗಾರರ ಪಸಾರ

ಹೆಸರು ಇಲ್ಲದಂತೆ ಹಾಳಾಗುವುದು: ಊರು ಹಾಳಾದ ಮೇಲೆ ಉಳಿಯುವದೊಂದೇ-ಸೂಳೆಗೇರಿ. ಇನ್ನು ಮುಂದೆ ಅಲ್ಲಿಗೆ ಬರುತ್ತಾನೆ ಲಲಿತಾಂಗ. ಅಲ್ಲಿದ್ದ ವಿಟರನ್ನೆಲ್ಲ ಬೆಂಬೆತ್ತೋಡಿಸುವುದು ಆತನ ಪ್ರಥಮ ಕಾರ್ಯ. ವಿಟರೆಲ್ಲ ಹಿಂಡಾಗಿ ಓಡುತ್ತಿರುವಾಗ, ಅವರನ್ನು ತಡೆದು ಒಬ್ಬನ ತಲೆಯನ್ನು ಇನ್ನೊಬ್ಬನ ತಲೆಗೆ ಗಂಟುಹಾಕಿ ಒದ್ದು ಓಡಿಸುತ್ತಾನೆ. ಗಡಿಬಿಡಿಯಲ್ಲಿ ಉಟ್ಟುದು ಕಳೆದರೆ ಕಚ್ಚೆಯ ಮೇಲೆ ಕೈಯಿಟ್ಟು ಓಡುವರು. ಅವರನ್ನು ಕಂಡು ವಿನೋದಗೊಂಡು ನಗುವುದು ಲಲಿತಾಂಗನ ರೀತಿನೀತಿ. ಹೀಗೆ ನಗುವುದೂ ನಗೆಯ ಒಂದು ಬಗೆ.

ಲಲಿತಾಂಗನ ಉಬ್ಬರಕ್ಕೆ ಅಬ್ಬರ ಬೆಳೆಯಲು, ಕಡೇ ಮನೆಯ ಒಬ್ಬ ಕುಂಟಣಿ ಶಯ್ಯಾಗಾರವನ್ನು ಹೊಕ್ಕು ಏನು ಮಾಡಿದಳು ಗೊತ್ತೆ ?

> ತಡೆಯದೆ ಮಗನೆಂದಳಿಯನ
> ನಡುವಂ ತಬ್ಬಿಕೊಂಡು ಹಿತ್ತಲ ದೆಸೆಯೊಳ್
> ಬಿಡದೋಡುವಾಗ ಕಾಣದೆ
> ಕೆಡೆದಳ್ಪಿರಿದೆನಿಪಾಗರೆಂಜಲ ಕುಳಿಯೊಳ್

ಮೊದಲೇ ಗಡಬಡಿಯ ಕುಂಟಣಿ ಅವಳು ! ಅಳಿಯನನ್ನು ಮಗನೆಂದು ಭಾವಿಸುತ್ತಾಳೆ. ಆತನ ನಡುವನ್ನು ಹಿಡಿದುಕೊಂಡು ಹಿತ್ತಲದಲ್ಲಿ ಹಾಯ್ದು ಓಡುತ್ತಿದ್ದಾಗ, ಮುಂದುಗಾಣದೆ ಎಂಜಲ ಗುಂಡಿಯಲ್ಲಿ ಬಿದ್ದು ಹೊರಳಾಡುತ್ತಾಳೆ. ಈ ದೃಶ್ಯ ನಗದವರನ್ನೂ ನಗಿಸುತ್ತದೆ. ವಿಟಕುಂಟಣಿಯರು ನೀತಿಗೆಟ್ಟವರು. ಆದ್ದರಿಂದ ಅವರಲ್ಲಿ ಸಾಮಾಜಿಕರ ಸಹಾನುಭೂತಿ ಕಡಿಮೆ: ಮೇಲಾಗಿ ಅವರಿಗೆ ಬಿದ್ದ ಪೆಟ್ಟು ದೊಡ್ಡದಲ್ಲವೆಂಬುದೂ ನಗುವವರಿಗೆ

ಹೊಳೆಗೆ ಬಂದು ಅರಿವೆಗಳನ್ನು ಹಸನ ಮಾಡುವ ಕಾರ್ಯದಲ್ಲಿ ನಿರತನಾಗಿದ್ದನು. ಆಗ ದೂರದಲ್ಲಿದ್ದ ಅಗಸಗಿತ್ತಿ ಲಲಿತಾಂಗ ಬರುತ್ತಿರುವುದನ್ನು ಅರಿತು, ತನ್ನ ಗಂಡನಿಗೆ 'ಲಲಿತಾಂಗ ಬಂದ' ಎಂದು ಕೂಗಿ ಹೇಳಿದಳು. ಆತ ಮೊದಲೇ ಕುರುಡ, ಲಲಿತಾಂಗ ಎಂಬ ಹೆಸರನ್ನು ಕೇಳುತ್ತಲೇ ದಿಕ್ಕೆಟ್ಟು 'ಅವ ಕಡೆಯಿಂದ ಬಂದನಕಟಾ' ಎಂದು ತಡವರಿಸಿ,

> "ಪಟ್ಟಿರ್ದ ನಾಯ ನಡುವಂ
> ಮೆಟ್ಟಿ ಕನಲ್ದೊಡನೆ ಮೇಲೆ ಪಾಯ್ವುದು ಕಿಸೆ ಬಾ
> ಯ್ವಿಟ್ಟು ಲಲಿತಾಂಗನಿಜಾಿದಂ
> ಕೆಟ್ಟೆನೆನುತ್ತೋಡುವಾತನಂ ರಂತ್ರೊರ್ವಂ॥

ತಾಂ ಕಂಡು ದಿಟಮೆಂದು ಬಗೆದು, ಭಯದಿಂದೋಡುತ್ತುಮಿರೆ ಕಾಡೊಳ್ ಒಂದು ಮರದ ಕೊಂಕುಗೊಂಬು ಆತನ ತುರುಂಬಂ ಪಿಡಿದು ತಡೆಯೆ, ಪೆಜಗಂ ನೋಡಲಣ್ಮದೆ

> ಬಿಡು ನಿನ್ನ ಧರ್ಮಮಿನ್ನಾಂ
> ನುಡಿಯೆಂ ಮತ್ತೆಂಟು ಮಕ್ಕಳೊಳವೆನಗಾಂ ಸ
> ತ್ತೊಡೆ ಪೆಜಗೀ ವೃಂದಮನ
> ಪ್ಪೊಡೆ ಪೊರೆವರಿಲ್ಲವಾಂ ದೇಸಿಗನೆಂ"॥

ಎಂದು ಬಯಲಿಗೆ ಬಾಯ್ ಬಿಡುತ್ತಾನೆ. ಈ ದೃಶ್ಯ ನಯನ ಮನೋಹರವಾದುದು. ಸಬಲ ಕಾರಣವಿಲ್ಲದಿದ್ದರೂ ಕಾರ್ಯ ಘನವಾಗಿ ನಡೆದುದನ್ನು ಓದುಗರು ಅರಿಯುತ್ತಾರೆ: ಬಿದ್ದು ಬಿದ್ದು ನಗುತ್ತಾರೆ. ಲಲಿತಾಂಗನ ದರ್ಪದಿಂದ ಹುಟ್ಟಿದ ಈ ನಗೆಗೆ ಪಂಡಿತರು ಜಿಗೋಡಾಟವೆಂದು ಹೆಸರಿಸಿದ್ದಾರೆ. ಇಲ್ಲಿ ಯಾವ ಧರ್ಮದ ತಿರಸ್ಕಾರವೂ ಇಲ್ಲ. ವ್ಯಕ್ತಿಗತ ದೋಷವನ್ನು

ಎತ್ತಿ ತೋರಿಸುವುದೇ ನಯಸೇನನ ನಗೆಯ ಹಿರಿಯ ಗುರಿ. ಲಲಿತಾಂಗನು ಮುಂದೆ ಏನು ಮಾಡಿದ, ಏನಾದನೆನ್ನುವುದು ಪ್ರಸ್ತುತವಲ್ಲ. ಕಥೆ ಕೇಳುವವರು ಅದನ್ನು ಓದಿಕೊಳ್ಳಲಿ; ನಮ್ಮ ಗುರಿ ಮುಖ್ಯವಾಗಿ ನಯಸೇನನ ನಗೆಯನ್ನು ಅರಿಯುವುದಾಗಿದೆ, ಆದ್ದರಿಂದ ಈ ನಗೆಯ ಕಥೆಯನ್ನು ಕೇಳಿ ನಾವೆಲ್ಲ ನಕ್ಕು ನಲಿದಾಡಿದುದೇ ಸಾಕು.

**ಅಮೂಢದೃಷ್ಟಿ :**

"ನನ್ನ ದೇವರ ಮುಂದೆ ಇನ್ನು ದೇವರುಂಟೆ?" ಎಂದು ಕೇಳುತ್ತಾನೆ ಪ್ರತಿಯೊಬ್ಬಮಾನವ. ತನ್ನ ದೇವರೇ ದೇವರದೇವನೆಂದು ನಂಬಿದರೆ ಅನ್ಯದೇವರ ಗತಿಯೇನು ? ಜಿನೇಶ್ವರನ ಮುಂದೆ ಅನ್ಯದೇವರಿಲ್ಲವೆಂದು ಹೇಳ ಹೊರಟ ನಯಸೇನ ತಾ ಮಾಡಬೇಕಾದ ಕಾರ್ಯವನ್ನು ಬಹು ಮನೋಹರವಾಗಿ ಮಾಡಿ ಮುಗಿಸುತ್ತಾನೆ. ಬ್ರಹ್ಮ, ವಿಷ್ಣು, ಮಹೇಶ್ವರರು ಜಿನೇಶ್ವರನಲ್ಲಿಯೇ ಮಾಂಡಳಿಕ ದೈವವಾಗಿದ್ದಾರೆಂದು ಪ್ರತಿಪಾದಿಸುವುದು ಜಿನಗೆ ನೈವೇದ್ಯ ತೋರಿಸಿದಂತಿದೆ. ಅದು ಅಮೂಢದೃಷ್ಟಿಯ ಕಥೆಯಲ್ಲಿ ರಮ್ಯವಾಗಿ ಬಂದಿದೆ.

ಶೂರಸೇನ ನಾಡು; ಮಥುರೆಯೇ ಅದರ ರಾಜಧಾನಿ. ಅದಕ್ಕೆ ಅಧಿಪತಿಯಾದ ವರುಣಮಹಾರಾಜನು ತನ್ನ ಪಟ್ಟಮಹಿಷಿಯಾದ ರೇವತಿಯೊಡನೆ ಖ್ಯಾತಿವೆತ್ತು ರಾಜ್ಯಭಾರ ನಡೆಸುತ್ತಿದ್ದನು. ಅತನದು ಮೂಢದೃಷ್ಟಿ, ಕಂಡಕಂಡ ದೇವರಿಗೆ ಕೈಮುಗಿಯುವ ಭಾವ; ಆದರೆ ರೇವತೀದೇವಿಗೆ ಅದು ಸಲ್ಲದು. "ಗುಣದೋಷದ ವಿಚಾರ ಮಾಡದ ಮನುಜ ಬಹಿರಂಗದ

ರಾಜನ ದೇವತಾಮೂಢತ್ವಕ್ಕೆ ಕಳಕಳಿಸಿ ನಗುತ್ತಾಳೆ, "ಇದು ಮಾಯಾವಿಗಳ ಮಾಟ,ಬೇಚರರಾಜನ ಸೋಗು ಅದು; ಅದನ್ನೇ ಬ್ರಹ್ಮವೆಂದು ನಿಶ್ಚಯಿಸಿ ಮೂಢಮಾನವರು ಮೋಸ ಹೋಗುತ್ತಾರೆ. ಸರಸಿಜಗರ್ಭನ ಕಮಲ ಹುಟ್ಟಿದ್ದೆಲ್ಲಿ? ವಿಷ್ಣುವಿನ ನಾಭಿಯಲ್ಲವೆ? ಅವನ ಹೊಕ್ಕಳಲ್ಲಿ ಕಮಲ ಜನಿಸಿದ್ದೇ ನಿಜವಾದರೆ ಆ ನಾಭಿಯಲ್ಲಿ ಜೇಡುಮಣ್ಣು, ರಾಡಿನೀರು ಎಷ್ಟಿರಬೇಕು? ಅವಾಸ್ತವದ ಪ್ರತಿಬಿಂಬ ಆ ಬ್ರಹ್ಮ" ಎಂದು ತಿಳಿವಳಿಕೆ ಹುಟ್ಟಿಸುತ್ತಾಳೆ. ವರುಣಮಹಾರಾಜನ ಮೂಢಬುದ್ಧಿಗೆ ಇದು ತಿಳಿಯದು. ಬ್ರಹ್ಮದೇವ ಮಾತ್ರ 'ಎಲ್ಲರೂ ನನ್ನನ್ನು ಪೂಜಿಸಿದರು. ರೇವತಿಯಳೊಬ್ಬಳೇ ನನ್ನ ಪೂಜೆಗೆ ಬರಲಿಲ್ಲ' ಎಂದುಕೊಂಡು ಮತ್ತೊಂದೆಡೆಗೆ ಬಂದು ಹೊಸ ರೂಪಧರಿಸಿ ನಿಲ್ಲುತ್ತಾನೆ. "ನಾರಾಯಣರೂಪಂ ಕೈಕೊಂಡಿರ್ಪುದುಂ ಪುರದವರೆಲ್ಲಂ ವಿಷ್ಣು ಪ್ರತ್ಯಕ್ಷಮಾಗಿರ್ದನೆಂದು ಪೂಜಿಸಿ ಪೊಡಮಡುವರ್." ಆ ದೇವನನ್ನಾದರೂ ಪೂಜಿಸಿ ಬರೋಣವೆಂದು ಮಹಾರಾಜ ಹೇಳಿದರೆ 'ವಿಷ್ಣು ಮಾಯಾವಿ'ಯೆಂದು ತಿಳಿಸಿ ಅರಸನ ಇಚ್ಛೆಗೆ ನೀರು ಹಣಿಸುತ್ತಾಳೆ. ರೇವತೀದೇವಿಯಿಂದ ತನಗೆ ಪೂಜೆ ಒದಗಲಿಲ್ಲವೆಂದು ಬಗೆದ ವಿಷ್ಣುರೂಪಿ ಮತ್ತೊಂದೆಡೆಯಲ್ಲಿ ಶಿವನ ರೂಪ ಧರಿಸಿ ಮೆರೆಯುತ್ತಾನೆ. ಜನಸಾಮಾನ್ಯರಿಂದ ಶಿವನಿಗೆ ಸಾಕಷ್ಟು ಪೂಜೆ ನಡೆಯುತ್ತದೆ. ಅರಸನ ಮನಸ್ಸು ಕಾತುರಗೊಂಡರೂ ರೇವತೀದೇವಿ ತಡೆಗಟ್ಟುತ್ತಾಳೆ.'ಕಿವಿಯೊಳ್ ಕೇಳ್ವ ಈಶ್ವರ'ನನ್ನು ಕಣ್ಣಾರೆ ಕಾಣುವ ಭಾಗ್ಯ ದೊರೆಗೆ ದೊರೆಯಲಿಲ್ಲ. ಸಂಸಾರಿಯಾದರೂ ಸುಡುಗಾಡಿನಲ್ಲಿ ಏಕಾಕಿಯಾಗಿರುವ ಶಿವ ದೇವರಲ್ಲವೆಂದೇ ರೇವತಿಯ ನಿಶ್ಚಯ.

ಕೊನೆಗೆ, ಆ ಮಾಯಾವಿ ಜಿನೇಂದ್ರನಾಗಿ ಬಂದು ನಿಂತರೆ ಸರ್ವರೂ ಪೂಜಿಸುತ್ತಾರೆ. ಅಸರನಿಗೂ ರಾಣಿಗೂ ಸಂತಸವಾಗುತ್ತದೆ. ಆಗ ರೇವತೀದೇವಿ ಆಡುವ ಮಾತುಗಳು ರಸಭರಿತವಾಗಿ ಬರುತ್ತವೆ : "ದೇವಾ ಪುಣಿಸೆಯ ಪೂವೆಲ್ಲಂ ಕಾಯಪ್ಪವೇ ? ನೆಲನನಗುಳ್ದರೆಲ್ಲಂ ನಿಧಾನಮಂ ಕಾಣ್ಬರೇ ? ಮೊಲೆಮುಡಿಯುಳ್ಳವರೆಲ್ಲಂ ಸ್ತ್ರೀಯರೆ ? ಪಾಡುವರೆಲ್ಲಂ ಗಾಂಧರ್ವರೇ ? ಮೂಢತ್ರಯರೆಲ್ಲಂ ಜೈನರೇ ?" ಈ ಅವತಾರ ಚಿತ್ರಗಳು ಓದುಗನನ್ನು ನಗಿಸದೇ ಬಿಡವು. ವೇಷಧಾರಿಗಳು ದೇವರಲ್ಲವೆಂದು ಹೇಳಿ ಜಿನನೇ ಶ್ರೇಷ್ಠದೈವವೆಂದು ತಿಳಿಸುವ ನಯಸೇನನಲ್ಲಿ ಕುಯುಕ್ತಿ ಮನೆಮಾಡಿಕೊಂಡಿದೆ. ಹೇಳುವ ರೀತಿ ನಯವಾಗಿ ಇದ್ದುದರಿಂದಲೇ ನಯಸೇನ ಬದುಕುತ್ತಾನೆ.

ಜೈನರ ಅಂದವನ್ನೂ, ಓಜೆಯನ್ನೂ, ನಡೆನುಡಿಯನ್ನೂ ಅಣಕಿಸುವ ಪರಮತೀಯರು ಆ ಕಾಲದಲ್ಲಿ ಹೆಚ್ಚಾಗಿರಬೇಕು. ಕೈಯಲ್ಲಿ ಕುಂಚ, ತಲೆಯ ಮೇಲೆ ಸತ್ತಿಗೆ, ಉಟ್ಟುದು ಬತ್ತಲೆ ! ಗುಂಡಿಗೆ ಬಿಡಲಾರದ ಕರ್ಮ, ಮೊದಲೇ ಮಲಧಾರಿಗಳು. ಸ್ನಾನ ಕನಸುಮನಸಲ್ಲಿಯೂ ಆಗದು. ಕೈಯಲ್ಲಿ ಊಟ. ಹಲ್ಲು ಉಜ್ಜಿದುದನ್ನು ಕಂಡವರೇ ಇಲ್ಲ – ಎಂಬ ಇನ್ನೂ ಏನೇನೋ ಟೀಕು ಟಿಪ್ಪಣಿ. ಅವರ ದರ್ಶನವೇ ಅಶುಭವೆಂಬ ಭಾವನೆ. ಇವೆಲ್ಲಕ್ಕೂ ತರ್ಕಬದ್ಧ ವಿವರಣೆ ಸಿದ್ಧವಾಗಿದೆ ನಯಸೇನನಲ್ಲಿ. ಅವನ ಮಾತುಗಳಲ್ಲಿಯೇ ಅರಿಯೋಣ : "ಕುಂಚಮಂ ದೋಷಮೆಂಬೊಡೆ ಕುಂಚಮಪ್ಪುದು ಪೀಲಿ. ಪೀಲಿಯುಮಂ ದೋಷಮೆಂಬೊಡೆ ತಳಿಯುಂ ಸತ್ತಿಗೆಯುಂ ಪಿಡಿದು ಬರ್ಪ

ರೆಲ್ಲರುಮಂ ಕಾಣಲಾಗದು. ನಿರ್ಗ್ರಂಥಮಂ ದೋಷಮೆಂಬೊಡೆ ಮಕ್ಕಳುಂ ಮರಂಗಳುಂ ಪಶುಗಳುಂ ನಿರ್ಗ್ರಂಥಮಂ ಕಾಣಲಾಗದು. ಗುಂಡಿಗೆ ದೋಷಮೆಂಬೊಡೆ ಗುಂಡಿಗೆ ಯುಪ್ಪುದು ತೆಂಗಿನಕಾಯ್, ತೆಂಗಿನ ಕಾಯುಂ ದೋಷ ಮೆಂಬೊಡೆ ತೆಂಗಿನ ಕಾಯುಂ ತಿಂಬರುಮಂ ಕಾಣಲಾಗದು. ವಿಾಯುದುದು ದೋಷಮೆಂಬೊಡೆ ಚಂದ್ರಾದಿತ್ಯರ್ಕಳೆಂದುಂ ವಿಾಯುರವರಂ ಕಾಣಲಾಗದು. ಮಲಮಂ ತಾಳ್ದುವುದು ದೋಷಮೆಂಬೊಡೆ ತಿಪ್ಪೆಯುಂ ತಾಳ್ದಿದ ನೆಲನುಮಂ ಗೊಬ್ಬರ ಮನೊಳಕೊಂಡ ಕೆಯ್ಗಳುಮಂ ಕಾಣಲಾಗದು. ನಿಂದುಣಿಸು ದೋಷಮೆಂಬೊಡೆ ಮರಂಗಳುಮಂ ಕಾಣಲಾಗದು. ಕೈಯ ಲುಂಬುದು ದೋಷಮೆಂಬೊಡೆ ಆನೆಯುಮಂ ಕಾಣಲಾಗದು. ಲೋಚು ದೋಷಮೆಂಬೊಡೆ ತಿರ್ದಿದ ಪ್ರವ್ರಜಿಸವರಂ ವಿಾಸೆ ಯುವರಂ ಕಾಣಲಾಗದು. ಪಲ್ಲಂ ಸುಲಿಯುದುದು ದೋಷಮೆಂ ಬೊಡೆ ಕೊಡುಗೂಸುಗಳುಮಂ ಕುಮಾರರುಮಂ ಕಾಣಲಾಗದು. ಮೋಕ್ಷ ಸಾಧಕರಪ್ಪ ಋಷಿಯರಂ ಕಂಡೊಡೆ ಲೇಸಲ್ಲದೆ ಪೊಲ್ಲೆಂಬುದಕ್ಕೆ ಕಾರಣಮಿಲ್ಲಂ"–ಈ ಹೇಳಿಕೆಯಲ್ಲಿ ತರ್ಕವಿದೆ, ಸಮರ್ಥನೆಯ ಸಾಮರ್ಥ್ಯವಿದೆ. ಅಲ್ಲದುದನ್ನು ಹೌದೆನ್ನುವಂತೆ ಹೇಳುವ ನಯಸೇನವಾಣಿ ಎಂತಹರನ್ನಾದರೂ ಸಮಾಧಾನ ಪಡಿಸುತ್ತದೆ. ಸಮಾಧಾನದ ಕುರುಹು ಮುಗುಳ್ನಗೆ; ಇಂತಹ ಮಂದಹಾಸವನ್ನೂ ಮರೆತಿಲ್ಲ ನಯಸೇನ.

**ಎಬಡರ ದಾರಿ :**

ಎಗ್ಗರೂ ಎಬಡರೂ ನಗೆಗೆ ತುತ್ತಾಗುವುದು ಸಹಜ. ಅವರ ವಿಪರೀತ ವರ್ತನೆಯೇ ನಗೆಗೆ ಕಾರಣ. ಇಂತಹರ

ದೃಷ್ಟಾಂತ ಕೊಟ್ಟು ಕಥೆ ಬೆಳೆಸುವ ನಯಸೇನ ಓದುಗರನ್ನು ನಗೆಗಡಲಲ್ಲಿ ಮುಳುಗಿಸಿ ತೇಲಿಸುತ್ತಾನೆ. ಒದೊಂದು ಸಲ, ಎರಡು ಸಲ ಮುಳುಗಿಸಿ ಒಂದು ಸಲ ಎಬ್ಬಿಸುತ್ತಾನೆ. ಆತನ ಮಾತಿನ ರೀತಿಯೇ ವಿಚಿತ್ರ. ಒಬ್ಬ ಎಗ್ಗ ಮಾಡಿದುದನ್ನು ಓದಿ ನೋಡಿ:'ಪೆಜರ ಪೆಂಡಿರ್ಗೆ ಬಳೆದೊಡಿಸುವ, ಪೆಂಡಿರಂ ಕೊಟ್ಟು ಮಾನ್ಯಂಬಡೆವ, ಮಗಳಂ ಮಾಱಿ ಮದುವೆಯುಪ್ಪ. ಮಾಳಿಗೆ ಯಂ ಸುಟ್ಟು ಸೀರೆನೆಯಂ ತಿಂಬ, ಮಗನಂ ಕೊಂದು ಗಂಡು ದೋಱುವ ಕವಿಲೆಯಂ ಕಱಿದು ನಾಯನೂಡುವ, ಲೋಗರ ಕಾರ್ಯಕ್ಕೆ ಬಡಿದುಕೊಳ್ವ, ಬಾಡಿಗೆಯ ಮನೆಗೆ ತಿವಿದುಕೊಳ್ವ, ನಡುಮನೆಯೊಳ್ ಬಾವಿಯನಗುಳ್ವ, ತೊಱಿಗೆ ನೀರನಡುವ; ಕಟ್ಟೆಗ್ಗರು ಎಲ್ಲೆಲ್ಲಿಯೂ ಇದ್ದಾರೆ. ಅವರು ಮಾಡುವ, ನುಡಿವ ರೀತಿಯಲ್ಲಿ ಅಸಂಬದ್ಧವಾದುದು ಮೇಲೆದ್ದು ಕಾಣುವಂತೆ ಕವಿ ಹೇಳುತ್ತಾನೆ. ಅದನ್ನು ಕೇಳಿ ನಾವು ನಗುವುದಿಲ್ಲವೆ?

ಕಡುಮೂರ್ಖರ್ ಮಾಡಿದುದಂ
ತಡೆಯದೆ ನಾಂ ಮಾಳ್ಪೆನೆಂದು ಮಸಗುವ ಪುರುಷಂ
ಕಡುಕಷ್ಟಂ ನಾಯ್ ಕಚ್ಚಿದೊ
ಡೊಡಗಚ್ಚಲ್ ಬೊಗುಳೆ ಬೊಗುಳಲೇಂ ಬಂದಪ್ಪುದೇ ॥

ಮೂರ್ಖರು ಮಾಡಿದುದನ್ನೇ ಮಾಡಹೋಗುವವ ಕಡುಮೂರ್ಖ ನೆನಿಸಿಕೊಳ್ಳುವನು. ನಾಯಿ ಕಚ್ಚಿ,ಬೊಗುಳುವಂತೆ ಬೊಗುಳಲು ಈತನಿಗೆ ಬಂದಪ್ಪುದೇ ? ಅವನ ವ್ಯವಹಾರ ಎಂತೆಂಬುದನ್ನು ವರ್ಣಿಸುವ ರೀತಿ ಹೀಗೆ : "ಪೊಸಬಸದಿಯುಂ ಮಾಡಿ ತೂಂತು ಪ್ಪೋದ ಕಳಸಮನಿಡುವಂತೆ;ಮಗಳ ಮದುವೆಯುಂ ಮಾಡಿ ರಂಡಿ ಯಾಗೆಂದು ಪರಸುವಂತೆ; ಪಟ್ಟಮುಂ ಕಟ್ಟಿ ಸಾಯೆಂದು

ಕೀಸೆಯನಿಕ್ಕುವಂತೆ; ಉಯ್ಯಲನಿಕ್ಕಿ ಗೋಮೂತ್ರದಿಂ ಕೈಗ ಚ್ಚಲ್ ಎಱೆವಂತೆ; ತೋಂಟಮಂ ಮಾಡಿ ಕಡಿದಂತೆ; ಮಗನಂ ಸಲಿಪಿ ಬಾವಿಯೊಳ್ ನೂಂಕುವಂತೆ; ಸಿಂಹಾಸನಮನೇಱಿ ಮಸಿಯಂ ಪೂಸುವಂತೆ." ಹೀಗೆ ಮಾಡುವ ಮೂರ್ಖರನ್ನು ಕಂಡರೆ ನಮಗೆ ನಗೆ. ನಯಸೇನನ ಹೋಲಿಕೆಗಳೇ ನಗೆನೀಡು ತ್ತಿರುವಾಗ ಆ ಮೂರ್ಖರು ಸುಮ್ಮನಿದ್ದಾರೆಯೇ ?

ಎಬಡರ ಸಂಖ್ಯೆ ನಮ್ಮ ಸಮಾಜದಲ್ಲಿ ನಿಬಿಡವಾಗಿದೆ. ಮುಂದಬುದ್ಧಿ ಎಬಡರ ಆಸ್ತಿ.ಒಂದನಾಡ ಹೋಗಿ ಮತ್ತೊಂದ ನಾಡಿ ಕಾರ್ಯವನ್ನೇ ಹದಗೆಡಿಸುವದು ಎಬಡರ ದುಡಿಮೆ. ಅವರ ಮಾಟ ಶುದ್ಧ ಹುಚ್ಚಾಟ.ಇಂತಹ ಎಬಡರನ್ನು ನಯಸೇನ ತನ್ನ ನಿತ್ಯಜೀವನದಲ್ಲಿ ಸಾಕಷ್ಟು ಕಂಡಿರಬೇಕು. ಅಂಥವರಲ್ಲಿ ಧನ್ವಂತರಿಗೆ ಹಿರಿಯ ಪಟ್ಟ. ಒಮ್ಮೆ ಆತನು ವರಧರ್ಮಭಟ್ಟಾ ರಕರಲ್ಲಿಗೆ ಬಂದು ಧರ್ಮಶ್ರವಣಂಗೈವಲ್ಲಿ ನಿದ್ರೆಬರುತ್ತದೆ. ಸರ್ವರೂ ಸ್ವಾಮಿಗಳ ಪ್ರವಚನವನ್ನು ಕಿವಿದೆರೆದು ಕೇಳುತ್ತ ಕುಳಿತಿದ್ದರೆ ಈತ ಮಲಗಿಕೊಂಡು ಮೂಗುದೆರೆದು ಗೊರಕೆ ಹೊಡೆಯುತ್ತಾನೆ. ಅದೇನು ಸಾಮಾನ್ಯ ಗೊರಕೆಯೆ ? ಅದರ ನಾದ ಬ್ರಹ್ಮಾಂಡವನ್ನೇ ಭೇದಿಸುವಂತಹುದು. ಅದು ಪ್ರವಚನ ಕಾರರಿಗೂ ತಿಳಿದು ಬರುತ್ತದೆ. ಅವರು ಗಟ್ಟಿಯಾಗಿ.

ವರಧರ್ಮವನುತ್ಸವದಿಂ
ಸ್ಥಿರಮನದಿಂ ಕೇಳಲೊಲ್ಲದಾತನೆ ಕಿಱಿಯಂ
ವರಧರ್ಮಮನಱಿವಿಂದಂ
ಸ್ಥಿರಮನನಾಗಱಿಯಲೊಲ್ಲದಾತನೆ ಬಱಿಯಂ ॥

ಎಂಬುದನ್ನು ಹೇಳುತ್ತಲೇ ನಿದ್ರೆ ತಿಳಿದು ಕಣ್ಣು ಉಜ್ಜಿಕೊಳ್ಳುತ್ತ ಎದ್ದು ಕೂಡ್ರುತ್ತಾನೆ ಧನ್ವಂತರಿ. ಆಗ ಸಭಿಕರೆಲ್ಲರು ಗೊಳ್ಳೆಂದು ನಗುತ್ತಾರೆ. ಅವರ ಆ ನಗೆ ಧನ್ವಂತರಿಯ ಎದೆಗೆ ಬಾಣದಂತೆ ನಾಟಿರಬೇಕು. ಅಭಿಮಾನಿಯಾದ ಆತನು ಸ್ವಾಮಿಗಳಿಗೆ ಕೈಮುಗಿದು "ಸ್ವಾಮಿೞ, ನನಗೊಂದು ವ್ರತವನ್ನು ದಯೆಮಾಡಿ ತಿಳಿಸಿರಿ. ಅದನ್ನು ಪಾಲಿಸುತ್ತ ನಾನೇಕೆ ದೊಡ್ಡವನಾಗಬಾರದು? ಎಂದು ಪ್ರಾರ್ಥಿಸಿಕೊಂಡನು. ಪೂಜ್ಯರು ವಾತ್ಸಲ್ಯದಿಂದ "ನಿಚ್ಚಲುಂ ತಱಂಟುದಲೆಯುಂ ಕಂಡಲ್ಲದುಣವೇಡ" ಎನ್ನಲು, ಹಾಗೆಯೇ ಮಾಡುವೆನೆಂದು ವ್ರತವನ್ನು ಕೈಕೊಂಡು ಮನೆಗೆ ಹೋಗುತ್ತಾನೆ.

ಧನ್ವಂತರಿಗೆ ತಱಂಟುದಲೆ ಕಾಣುವುದು ಎಂದು? ಅದನ್ನು ಕಂಡ ಮೇಲಲ್ಲವೆ ಊಟ? ಅದನ್ನು ಕಾಣುವದಕ್ಕಾಗಿ ಕೆಲವು ದಿವಸ ಉಂಡು ತಿರುಗಾಡಿದ; ಹಲವು ದಿವಸ ತಿರುಗಾಡಿ ಉಂಡ. ಹೀಗೆಯೇ ಎಷ್ಟು ದಿವಸ ತಳ್ಳಬೇಕು ? ಸ್ವಾಮಿಗಳು ತಿಳಿಸಿದ ವ್ರತ ತಟ್ಟನೆ ನೆನಪಾಯಿತು; ಹೇವ ಮನದಲ್ಲಿ ಹುಟ್ಟಿತು. ಮುನಿ ಹೇಳಿದ ಮಾತನ್ನು ನಡೆಸದಿದ್ದರೆ ಮಹಾ ಅಪರಾಧವಾಗುವುದೆಂದು ಮನದಲ್ಲಿಯೇ ಮಿಡುಕತೊಡಗಿದ. 'ಮನವಿದ್ದಲ್ಲಿ ಮಹಾದೇವ' ಎನ್ನುವ ಗಾದೆ ಸುಳ್ಳಲ್ಲ. ಧನ್ವಂತರಿಯ ಮನಕ್ಕೆ ನೆರೆಮನೆಯ ಕುಂಬಾರನ ನೆನಪು ಬಂತು. ಆತನಿಗೆ ತರಂಟುವಲೆ ಇದ್ದುದು ವಿಖ್ಯಾತ ವಿಷಯ. ಅದನ್ನು ನಿತ್ಯದಲ್ಲಿ ಕಂಡು ಉಂಡರೆ ವ್ರತಪಾಲನೆ ಆಗುವುದೆಂದು ಬಗೆದು, ಧನ್ವಂತರಿ ಕುಂಬಾರನ ಮನೆಗೆ ಓಡಿಹೋದ. ಸಂದಿಗೊಂದಿಯನ್ನು ಬಿಡದೆ ಮನೆಯಲ್ಲೆಲ್ಲ ಹುಡುಕಿದ. ಅವನಲ್ಲಿ ಸಿಗಬೇಕು—ಆತ ಹೋಗಿದ್ದ ಮಣ್ಣಿಗೆ.

ಧನ್ವಂತರಿ ಮಣ್ಣುಗುಂಡಿಗೂ ಓಡಿದ. ಓಡುವಾಗ ಎಡವಿಬಿದ್ದ; ಮಣ್ಣುಮುಕ್ಕಿ ಕಣ್ಣೊರಿಸಿಕೊಂಡ. ಬಿದ್ದುದನ್ನು ದೂರದಲ್ಲಿದ್ದ ಕುಂಬಾರ ನೋಡಿ ನಕ್ಕು ಪುನಃ ಮಣ್ಣುಗುಂಡಿಯನ್ನು ತೋಡ ತೊಡಗಿದ. ಕುಂಬಾರನ ಬೋಳ ಮಂಡೆಯ ದರ್ಶನವಾಗುತ್ತಲೇ ಧನ್ವಂತರಿ "ತಬಿಂಟುದಲೆಯ ಕಂಡೆಂ" ಎಂದು ಕೂಗಿಕೊಳ್ಳುತ್ತ ಮನೆಗೆ ಓಡಿದನು. ಅದೇ ಸಮಯಕ್ಕೆ ಸರಿಯಾಗಿ, ಮಣ್ಣುಕಡಿವ ಕುಂಬಾರನಿಗೆ ಹೊನ್ನ ಮಡಿಕೆ ಸಿಕ್ಕಿತು. "ಧನ್ವಂತರಿ ಕಂಡನೆಂದೋಡಿದುದು ಏನನ್ನು ಕಂಡು?" -ಎನ್ನುವ ವಿಚಾರ ಆತನ ತಲೆಯಲ್ಲಿ ಸುಳಿಯತೊಡಗಿತು. "ಬಹುತರವಾಗಿ ನನಗೆ ದೊರೆತ ನಿಕ್ಷೇಪವನ್ನು ಕಂಡೇ ಆತನು ಹಾಗೆ ಕೂಗಿಕೊಂಡಿರ ಬೇಕು; ಗುಟ್ಟು ರಟ್ಟಾಯಿತು" - ಎಂದುಕೊಂಡು ಹೊನ್ನನ್ನು ಮಣ್ಣಲ್ಲಿ ಮುಚ್ಚಿಕೊಂಡು ಮನೆಗೆ ತಂದನು. "ಇದು ಅಧಿಕಾರಿಗಳಿಗೆ ಹೇಳಿದರೆ ನನ್ನನ್ನು ಶಿಕ್ಷಿಸುತ್ತಾರೆ; ಧನ್ವಂತರಿಯ ಬಾಯಲ್ಲಿ ಮಾತು ನಿಲ್ಲುವುದಿಲ್ಲ" ಎಂದು ಬಗೆದು ಮಧ್ಯರಾತ್ರಿಯಾಗುತ್ತಲೇ ಆ ಹೊನ್ನನ್ನು ಹೊತ್ತು ತಂದು ಕೈಮುಗಿದು,

ಆನೀ ಪೊನ್ನಂ ಕಾಣ್ಬುದು
ವಿನಾ ನೀನೊರತಸಿ ಕಂಡೆನೆಂದೊಡೆ ಭಯದಿಂ
ದಾನಂಜಿ ತಂದುಕೊಟ್ಟೆಂ
ನೀನಜುವ್ವೆ ಮುನಿದು ಕೊಲ್ವೊಡಂ ರಕ್ಷಿಪೊಡಂ ॥

ಎಂದು ಬಿನ್ನವಿಸಲು ಧನ್ವಂತರಿಗೆ ಆದ ಆನಂದ ಅವರ್ಣನೀಯ. ಇದೆಲ್ಲ ಮುನಿಯ ಮಹಿಮೆಯೆಂದು ಬಗೆದು, ಕೈಕೊಂಡ ವ್ರತವನ್ನು ನೆನೆದು, ಕುಂಬಾರ ತಂದ ಹಣವನ್ನು ಕೈಮುಟ್ಟಿ ಮನ ಮುಟ್ಟಿ ಸ್ವೀಕರಿಸಿದ. ಕುಂಬಾರನು ಈ ವಿಷಯವನ್ನು ಪರರಿಗೆ

ಹೇಳಿದರೆ ತನ್ನ ಗತಿಯೇನೆಂದು ಲೆಕ್ಕಹಾಕಿ, ಅವನಿಗೂ ಸ್ವಲ್ಪ ಹಣಕೊಟ್ಟು ಉಳಿದುದನ್ನು ಎಣಿಸಿ ಗುಣಿಸಿ ತೃಪ್ತಿಗೊಂಡ. ಈ ಪ್ರಸಂಗವೇ ನಗೆಯ ಕಡಲಾಗಿದೆ. ತರಂಟುದಲೆಯ ಜಿನ ಮುನಿಯ ದರ್ಶನ ಪಡೆದು ಊಟಮಾಡುವ ವ್ರತವನ್ನು ಗುರು ಬೋಧಿಸಿದರೆ, ಈ ಎಬಡ ಧನ್ವಂತರಿ ಕುಂಬಾರನ ಬೋಳುದಲೆ ಯನ್ನು ಕಂಡು ಉಣ್ಣುವ ವ್ರತಕ್ಕೆ ಕೈಹಾಕುತ್ತಾನೆ. ಇದೇ ಎಬಡರ ಹಾದಿ. ದ್ರವ್ಯ ದೊರೆತಾಗ 'ಕಾಗೆ ಕೂಡ್ರುವುದಕ್ಕೂ ಟೊಂಗೆ ಮುರಿಯುವುದಕ್ಕೂ ಸಮ' ಎನ್ನುವಂತಾಯಿತು. ಆದರೆ ಅದು ವ್ರತದ ಮಹಿಮೆಯೆಂದು ಧನ್ವನಂತರಿಯು ನಬಿಗೆ ನಂಬಿಬಿಟ್ಟಿತು.

ದುಡ್ಡು ಬಂದಷ್ಟು ಕಡಮೆಯೆನ್ನುತ್ತದೆ ಮನದ ಮುಂದಣ ಆಸೆ. ಮತ್ತೊಂದು ವ್ರತವನ್ನು ಪಡೆದು ಹೆಚ್ಚಿನ ಲಾಭವನ್ನು ದೊರಕಿಸಲು ಧನ್ವಂತರಿ ಲೆಕ್ಕಹಾಕುತ್ತಾನೆ. ಮರುದಿವಸ ಬಸದಿಗೆ ಬಂದು ಧರ್ಮಭಟ್ಟಾರಕರಿಗೆ ವಂದಿಸಿ, ಇನ್ನೊಂದು ವ್ರತವನ್ನು ದಯೆಗೈಯಬೇಕೆಂದು ಅಂಗಲಾಚಿ ಬೇಡಿಕೊಳ್ಳು ವನು. ಮುನಿವರನು "ಮಗನೆ, ಹೆಸರು ಅರಿಯದ ಗಿಡದ ಹಣ್ಣನ್ನು ಎಷ್ಟೇ ಹಸಿವೆಯಾದರೂ ತಿನ್ನಬೇಡ" ಎಂದು ವ್ರತ ನಿಯಮ ತಿಳಿಸುತ್ತಾನೆ. ಆ ವ್ರತವನ್ನೇ ನಡೆಸುವೆನೆಂದು ಹೇಳಿ, ಧನ್ವಂತರಿ ಮನೆಗೆ ಬರುವನು. ಕೆಲವು ದಿವಸ ಕಳೆದವು. ಆತನು ತನ್ನ ಗೆಳೆಯನಾದ ವಿಶ್ವಾನುಲೋಮನೊಡನೆ ಸೈನ್ಯ ಸಮೇತ ಪರದೇಶಕ್ಕೆ ಹೋಗಿ ಬಹು ದ್ರವ್ಯವನ್ನು ಕದ್ದು ಸಂಗ್ರಹಿಸಿಕೊಂಡು ಮರಳುತ್ತಾನೆ. ಮಾರ್ಗದಲ್ಲಿ ಹಸಿವಾಗು ತ್ತದೆ; ತಿನ್ನಲು ಅವರಲ್ಲಿ ಏನೂ ಇದ್ದಿಲ್ಲ. ಆಗ ಧನ್ವಂತರಿ ತನ್ನ

ಸೈನಿಕರಿಗೆ ಹಣ್ಣುಗಳೇನಾದರೂ ಅಡವಿಯಲ್ಲಿ ದೊರೆತರೆ ಹರಿದು ತರಲು ಆಜ್ಞಾಪಿಸುವನು. ಅವರು ಅತ್ತಿತ್ತ ಅಲೆದಾಡಿ ಕಾಂಚೀರ ಹಣ್ಣುಗಳನ್ನು ಸಂಗ್ರಹಿಸಿಕೊಂಡು ಮರಳಿ ಬರುತ್ತಾರೆ; ಹಣ್ಣನ್ನು ಧನ್ವಂತರಿ-ವಿಶ್ವಾನುಲೋಮರ ಮುಂದೆ ಸುರುವುತ್ತಾರೆ. ಆ ಹಣ್ಣಿನ ಗಿಡವ ಹೆಸರು ಧನ್ವಂತರಿಗೆ ಗೊತ್ತಿಲ್ಲವಾದ್ದರಿಂದ ವ್ರತ ಕೆಡಲಾಗದೆಂದು ಹಣ್ಣನ್ನು ಮುಟ್ಟುವುದಿಲ್ಲ. ಧನ್ವಂತರಿ ಒಲ್ಲದಿದ್ದರೆ 'ನಾನೂ ಈ ಹಣ್ಣು ತಿನ್ನಲಾರೆನೆ'ಂದು ವಿಶ್ವಾನುಲೋಮ ತಿಳಿಸುತ್ತಾನೆ. ಸೈನಿಕರು ಮಾತ್ರ 'ಈ ವ್ಯರ್ಥರ ಮಾತು ಕೇಳಿ ನಾವೇಕೆ ಸಾಯಬೇಕೆ'ಂದು ಯೋಚಿಸಿ ಹಣ್ಣನ್ನೆಲ್ಲ ತಿಂದುಬಿಡುತ್ತಾರೆ. ಅವು ವಿಷದ ಹಣ್ಣುಗಳಾದುದರಿಂದ ಅವರೆಲ್ಲ ಮೃತ್ಯುವಿನ ಬಾಯಿಗೆ ತುತ್ತಾಗುವರು. ಧನ್ವಂತರಿ ವಿಶ್ವಾನುಲೋಮರು ಸತ್ತವರ ಹಣವನ್ನು ಕೊಚ್ಚಿಕೊಂಡು, ಮನೆಗೆ ತಂದು ತೃಪ್ತಿಬಡುತ್ತಾರೆ. ವ್ರತದ ಮಹಿಮೆಯಿಂದಲೇ ತಮಗೆ ಹೆಚ್ಚಿನ ಲಾಭವಾಯಿತೆಂದು ಅವರು ನಂಬುವರು.

ವ್ರತಾಚರಣೆಯಿಂದ ದುರ್ಗಮವಾದುದನ್ನೂ ಗೆದ್ದು ಸಿರಿ ಸಂಪತ್ತು ದೊರಕಿಸಿಬಹುದೆಂದು ಧನ್ವಂತರಿಗೆ ನಂಬಿಗೆ. ಹೊಸ ಹೊಸ ವ್ರತಗಳನ್ನು ಕೈಕೊಂಡರೆ ಅಧಿಕಲಾಭವೆಂದು ಬಗೆದು, ಪರಧರ್ಮಭಟ್ಟಾರಕರಲ್ಲಿಗೆ ಬಂದು ಮತ್ತೊಂದು ವ್ರತವನ್ನು ಯಾಚಿಸುತ್ತಾನೆ. ಆಗ ಅವರು ಪ್ರತಿಪರ್ವದ ಅಷ್ಟಮಿ ಚತುರ್ದಶಿ ಗಳಂದು ಮಧ್ಯಮಾಂಸಗಳನ್ನು ತೊರೆಯಲು ತಿಳಿಸುವರು. ಧನ್ವಂತರಿ ಆ ವ್ರತವನ್ನು ಕೈಕೊಂಡ ಅಲ್ಪ ಕಾಲದಲ್ಲಿಯೇ ವಿಶ್ವಾನುಲೋಮನನ್ನು ಕರೆದುಕೊಂಡು ದೂರದೇಶಕ್ಕೆ ಹೋಗಿ

ಅಪಾರಹಣವನ್ನು ಕದ್ದು ಮರಳುತ್ತಾನೆ. ಬರುವಾಗ ಗಿರಿತಟ ವೊಂದರಲ್ಲಿ ಬೀಡುಬಿಟ್ಟು ವಿಶ್ರಮಿಸುತ್ತಾನೆ. ಆಗ ವಿಶ್ವಾನು ಲೋಮನಿಗೆ ಮಧ್ಯಮಾಂಸವನ್ನು ತಿನ್ನುವ ಆಸೆಯಾಗುವುದು. ಅವೆರಡೂ ಸಂಸಾರದ ಸಾರಸರ್ವಸ್ವವೆಂದೇ ಆತನ ಭಾವನೆ. ಒಳ್ಳೆಯ ಮಾಂಸವನ್ನು ತರಲು ಆತನು ನಾಲ್ಕುಜನ ಬಂಟರಿಗೆ ತಿಳಿಸುತ್ತಾನೆ. ಧನ್ವಂತರಿ ತನ್ನ ನಾಲ್ವರು ಬಂಟರಿಗೆ ಮಧ್ಯವನ್ನು ತರಲು ನಿಯಮಿಸುತ್ತಾನೆ. ಮಾಂಸ ತರಲು ಹೋದ ನಾಲ್ವರು ತಮ್ಮಲ್ಲಿಯೇ ಯೋಚಿಸಿದರು: 'ಮಾಂಸದಲ್ಲಿ ವಿಷವೆರೆಸಿ ಮಿಕ್ಕ ವರಿಗೆ ನೀಡಿದರೆ ಅವರೆಲ್ಲ ತಿಂದು ಸಾಯುವರು. ಆಗ ನಮಗೆ ಅಪಾರ ಧನ ಸಿಗುವುದು' –ಎಂದುಕೊಂಡು ಮಾಂಸದಲ್ಲಿ ವಿಷ ಹಾಕಿದರು. ಮಧ್ಯ ತರಲು ಹೋದವರು ಇವರಂತೆಯೇ ಯೋಚಿಸಿ ಮದ್ಯದಲ್ಲಿ ವಿಷ ಕೂಡಿಸಿದರು. ಮದ್ಯಮಾಂಸ ಬರು ತ್ತಲೇ ಧನ್ವಂತರಿಗೆ ತಾನು ಕೈಕೊಂಡ ವ್ರತದ ನೆನಪಾಗುವುದು. ಅಂದು ಚತುರ್ದಶಿ; ಮದ್ಯಮಾಂಸವನ್ನು ಸ್ವೀಕರಿಸುವಂತಿಲ್ಲ; ಆತನಾಗ ಏನನ್ನೂ ತಿನ್ನಲಿಲ್ಲ, ಕುಡಿಯಲಿಲ್ಲ. ಗೆಳೆಯನಿಗೆ ಬೇಡಾದುದು ತನಗೇತಕ್ಕೆಂದು ವಿಶ್ವಾನುಲೋಮನೂ ಅವನ್ನು ನಿರಾಕರಿಸಿದ.ಮಿಕ್ಕವರ ಹಸಿವೆ ತಡೆದೀತೆ? ಮಾಂಸವನ್ನು ತಂದ ವರು ಮದ್ಯವನ್ನು ಗುಟುಕರಿಸಿದರು. ಮದ್ಯವನ್ನು ತಂದವರು ಮಾಂಸವನ್ನು ತಿಂದರು. ಮಿಕ್ಕವರೆಲ್ಲ ಎಲ್ಲವನ್ನೂ ತಿಂದು ಕುಡಿದು ತೇಗಿದರು. ಅವರೆಲ್ಲ ಸತ್ತರೆಂದು ಬೇರೆ ಹೇಳಬೇಕೆ? ಅವರ ಹೆಣಗಳನ್ನೆಲ್ಲ ನೋಡಿ, ' ಇದು ಸುವ್ರತದ ಮಹಿಮೆ ' ಯೆಂದು ಧನ್ವಂತರಿ ಗುರುಗಳನ್ನು ಮನವಾರೆ ಕೊಂಡಾಡಿದನು.

ಹೀಗೆಯೇ ದೀರ್ಘಕಾಲ ಕಳೆಯಿತು. ವ್ರತದ ಬಲದಿಂದಲೇ ಮಾಡುವುದೆಲ್ಲ ಅಹಿತವೆಂದು ಬಗೆದು, ಧನ್ವಂತರಿ ದೀಕ್ಷಾಬದ್ಧನಾಗಿ ತಪಶ್ಚರ್ಯಕ್ಕೆ ತೆರಳುವನು. ಈ ಎಬಡ ಎಲ್ಲಿಗೆ ಹೋದರೇನು ? ಹಿಂದೆ ನಡೆದ ಆತನ ನಡೆನುಡಿ ನಮ್ಮನ್ನು ನಗಿಸುತ್ತವೆ; ನಮಗೆ ಅಷ್ಟೇ ಸಾಕು; 'ಬಱಿದೆ ಕುಣಿವಂಗೆ ಮತ್ತಂ ಪಱಿಯುವನುಂ ಕೂಡಿದಂತೆ' ಕೂಡಿದ್ದ ವಿಶ್ವಾನುಲೋಮನಿಗೂ ಪಶ್ಚಾತ್ತಾಪವಾಗಿರಬೇಕು. ನಮಗೆ ಮುಖ್ಯವಾಗಿ ನಗೆತರುವುದು ಅವರಲ್ಲಿದ್ದ ಎಬಡತ್ವ. ಇಂತಹ ಅನೇಕ ಎಬಡರನ್ನು ನಮ್ಮ ದರ್ಶನಕ್ಕೆ ತಂದ ನಯಸೇನತ್ವ ಮಾತ್ರ ನಿತ್ಯಸತ್ಯ. "ಪಾಪಹೇತುಗಳೊಳ್ ತೊಡರ್ದು ಪರತ್ರೆಯೊಳ್ ಸುಖಮಂ ಬಯಸುವಾತಂ ಜೋಳಮಂ ಬಿತ್ತಿ ಕಳಿವೆಯಂ ಬಯಸುವ ಎಗ್ಗನಂತೆ; ಬೇವಿನಾರವೆಯುಟು ಮಾವಿನ ಪಣ್ಣನಱಸುವ ಗಾವಿಲನಂತೆ; ಕೋಣನಂ ಪೊರೆದ್ದುಟ್ಟ ಪಾಲನಱಸುವ ಗಾಂಪನಂತೆ, ಬಿಡದುಯ್ಯಂ ಕುಟ್ಟಿ ಪದೆದಕ್ಕಿಯನಱಸುವ ಬೆಳ್ಳನಂತೆ." ಇಂತಹ ಎಗ್ಗ, ಗಾವಿಲ, ಗಾಂಪ, ಬೆಳ್ಳ, ಎಬಡ ಪ್ರಸಂಗಾನುಸಾರವಾಗಿ ನಯಸೇನನ ಹಾಸ್ಯ ಪ್ರಪಂಚದಲ್ಲಿ ಕಾಲಿಟ್ಟು ನಗಿಸುವುದನ್ನು ಮರೆಯಲಾರೆವು.

**ನಗೆಯ ನಂಜು :**

ನಗೆಗಾರ ವಿಡಂಬಕನಾದರೆ ಮಾತೇ ಮುಗಿಯಿತು. ಹೊರಟ ನಗೆ ನಂಜಿನ ಅಲಗಾಗುತ್ತದೆ. ನಯಸೇನನಿಗೆ ಇಂತಹ ನಗೆಯುಪರಿಚಯ ಸಾಕಷ್ಟು ಇದೆ. ಹೆಜ್ಜೆ ಹೆಜ್ಜೆಗೂ ವಿಡಂಬನೆಯ ಬತ್ತಳಿಕೆಯಲ್ಲಿರುವ ನಗೆಬಾಣಗಳನ್ನು ಹಿರಿಯುವುದೇ ಅವನ

ಕಾವ್ಯದ ವೈಶಿಷ್ಟ್ಯ. ನಮ್ಮವ ತಮ್ಮವ ಎನ್ನುವ ಭೇದಭಾವ ಅವನಲ್ಲಿಲ್ಲ. ತಪ್ಪು ಎಲ್ಲಿಯೇ ಇರಲಿ; ಅದನ್ನು ಬಯಲಿಗೆಳೆದು ನಗೆಯಾಡುವುದು ನಯಸೇನನ ಸ್ವಭಾವ.

'ಹೆಸರೇನೋ ಹಾಲವ್ವ; ಹುಳಿ ಮಜ್ಜಿಗೆಗೂ ಠಿಕಾಣಿ ಇಲ್ಲ' ಎನ್ನುವುದು ಒಂದು ಗಾದೆ. ಹಾಲವ್ವನ ಮನೆಯಲ್ಲಿ ಹುಳಿ ಮಜ್ಜಿಗೆಯ ಹನಿಯೂ ಸಿಗಲಾರದು. ಹೀಗಿದ್ದಾಗ ಅವಳಿಗೆ ಹಾಲವ್ವ ಎನ್ನುವ ಹೆಸರು ಹೇಗೆ ಅನ್ವರ್ಥಕವಾದೀತು ? ಒಮ್ಮೊಮ್ಮೆ ಅರ್ಥಕ್ಕೂ ವಸ್ತುವಿಗೂ ಹೊಂದಿಕೆಯೇ ಆಗುವುದಿಲ್ಲ. ವಿರುದ್ಧ ಅರ್ಥವೆ ಹೊರಹೊಮ್ಮುವುದುಂಟು. ಕನಸು ತಿರುಕನದಾದರೂ ಅಷ್ಟೇ ! ಮಹಾರಾಜನದಾದರೂ ಅಷ್ಟೇ!! ಕನಸು ನನಸಲ್ಲ.ಹೀಗೆಯೇ ತಿರುಕ ಕನಸಿನಲ್ಲಿ ಅರಸನಾದರೆ ಅರಸ ಎನ್ನುವ ಹೆಸರು ಆತನಿಗೆ ಹೇಗೆ ಸಾರ್ಥಕವಾಗಬಲ್ಲುದು? ಹೀಗಾದರೆ '' ವಾಂತಿಯ ಪೆಸರ್ ಪೈಲಾರಮೆಂಬಂತೆ, ಪೊಲೆಯರಾಡಿನ ಪೆಸರ್ ಮಾಣಿಕದೇವಿಯೆಂಬಂತೆ, ತೊತ್ತಿನ ಪೆಸರ್ ಸಿರಿದೇವಿಯೆಂಬಂತೆ, ಎಮ್ಮೆಯ ಪೆಸರ್ ಮಹಾದೇವಿಯೆಂಬಂತೆ. ಓಡಿನ ಪೆಸರ್ ಮಂಗಳವೆಂಬಂತೆ." ನಯಸೇನನ ಈ ದೃಷ್ಟಾಂತಗಳಲ್ಲಿ ವಿಡಂಬನೆಯ ಮೊನಚು ಇದೆ; ನಗೆಯ ಝರಿ ಇದೆ. ಇಂತಹ ಸಾಮಾಜಿಕ ದೋಷಗಳನ್ನು ಎತ್ತಿ ನಯಸೇನ ನಗೆಯಾಡುವುದನ್ನು ಆತನ ಕೃತಿಯಲ್ಲಿ ಕಾಣಬಹುದು.

ಮಾಣಿಕಭಟ್ಟನೇ ಮಾಣಿಕದ ಪರೀಕ್ಷೆ ಮಾಡಬಲ್ಲ. ಅದು ಬೇಕ್ಕವರಿಂದ ಸಾಧ್ಯವಿಲ್ಲ. ಚೇಳಿನ ಮಂತ್ರ ಗೊತ್ತಿಲ್ಲದವನು ಹಾವಿನ ಗುದ್ದಿನಲ್ಲಿ ಕೈಯಿಡಬಾರದು. ಹೊಟ್ಟೆನೋವಾದರೆ

ಮೊಳಕಾಲಿಗೆ ಔಷಧ ಹಚ್ಚುವುದೇ ? ಅಂತಹರ ಕಾರ್ಯವನ್ನು ನಯಸೇನ ಹೀಗೆ ಬಣ್ಣಿಸುತ್ತಾನೆ : "ಪಂದಿ ಕೆಯ್ಯಂ ತಿಂದೊಡೆ ಕತ್ತೆಯ ಕಿವಿಯಂ ಕೊಯ್ದರೆಂಬಂತೆ, ಸೂಳೆಬಂಟಂಗಾಜಿದೆ ಶಂಖದ ಗೊರವನಂ ಬಡಿದರೆಂಬಂತೆ, ಪೆಂಡಿರ ದೋಷಕ್ಕೆ ಮಕ್ಕಳ ಮೂಗಂ ಕೊಯ್ದರೆಂಬಂತೆ." ಗಂಡನ ಮೇಲೆ ಸಿಟ್ಟೆಗೆದ್ದು ಮಕ್ಕಳನ್ನು ಬಡಿದು ಸಮಾಧಾನವನ್ನು ಹೊಂದುವ ಹೆಂಡರು ಎಲ್ಲೆಲ್ಲಿಯೂ ಇದ್ದಾರೆ. ಅಂಥವರ ಬುದ್ಧಿ ನಿರ್ಬುದ್ಧಿ. ಕಾಯುವ ಧರ್ಮವನ್ನು ಬಿಟ್ಟು ಕೊಲ್ಲುವ ಧರ್ಮವನ್ನು ಕೈಕೊಳ್ಳುವವರೇ ಹೆಚ್ಚು. ಕುಧರ್ಮ ಕಾಪಾಡಲಾರದು. ಬೆರಣಿಯನ್ನು ಆಯ್ಕೆ ಮಾಡುವುದೇ ಅದರ ಕಾರ್ಯ; ಅಟ್ಟುಂಬುವ ಕಾರ್ಯ ಅಲ್ಲಿ ಸಾಗದು. ಅಂತಹ ಧರ್ಮವನ್ನು ನಂಬುವುದೆ ? ನಯಸೇನ ಅಪರ ಸ್ಥಿತಿಗತಿಯನ್ನು ಹೀಗೆ ಹೋಲಿಸುತ್ತಾನೆ; "ಮುಗಿಲ ನೀರಂ ನಂಬಿ ದೋಣಿಯ ನೀರಂ ತುಳುಂಕುವ ಕೋಡಗಮುಮಂ, ನಂಟರ ಮಕ್ಕಳಂ ನಂಬಿ ತನ್ನ ಮಕ್ಕಳಂ ಕಳೆವ ನಿರ್ಬುದ್ಧಿಯುಮಂ, ಜಾರೆಯ ಮಾತಂ ನಂಬಿ ತನ್ನ ಪೆಂಡತಿಯಂ ಬಿಡುವ ಬೇಂಟಗಾಜನುಮಂ, ಕಳ್ಳನ ನುಡಿಯಂ ನಂಬಿ ತಳಾಜನಂ ಕೊಲ್ವ ಗ್ರಾಮಣಿಯುಮಂ, ಮದುವೆಯ ಕೂಳಂ ನಂಬಿ ಮನೆಯ ಧಾನ್ಯಮಂ ಸೂಜಿಗೊಡುವ ಜೆಳ್ವನುಮಂ, ಗುಡಿಯಂ ನಂಬಿ ಮನೆಯಂ ಸುಡುವ ನಿರ್ಬುದ್ಧಿಯುಮಂ, ಸೋರೆಯ ಬಟ್ಟಲಂ ನಂಬಿ ಕಂಚಿನ ಬಟ್ಟಲಸೊಡೆವ ಗೊರವನುಮಂ , ಕಳ್ಳಿಯಂ ನಂಬಿ ಕೌಂಗಿನ ತೋಂಟಮಂ ಕಡಿವ ತೋಂಟಿಗನುಮಂ ಅವರ್ ಪೋಲುವರ್."

ಪಂಚೇಂದ್ರಿಯಗಳಿಗೆ ಪಕ್ಕಾಗಿ ಸಂಸಾರದ ಅಲ್ಪಸುಖದಲ್ಲಿ ತೊಳಲಾಡುವವರಿಗೆ ನಿಜಸುಖ ಸಿಗಲಾರದು. ಇಂದ್ರಿಯಗಳು ಸತ್ಯಸುಖದ ದಾರಿಯನ್ನು ತೋರಲಾರವು. ಅವನ್ನು ನಂಬಿ ದಾತನೇ ಕೆಟ್ಟ; "ಬೂತಿನ ಮಾತಂ ನಂಬಿ ಕಾಳಗಕ್ಕೆ ಪೋಪನುಂ ಕಳ್ಳನೊಡಗೂಡಿ ವ್ಯವಹಾರಕ್ಕೆ ಸಾಗುವನುಂ, ಬಂದಿಕಾಜನ ಮಾತಂ ನಂಬಿ ಸಂಚಿತಧನಮುಂ ತೋರ್ಪನುಂ, ತಳಾಜನ ಮಾತಂ ನಂಬಿ ಮನದ ಪೊಲ್ಲಮೆಯುಂ ಪೇಳ್ವನುಂ, ಧೂರ್ತನಂ ನಂಬಿ ಬಾವಿಯೊಳ್ ಬೀಳ್ವನುಂ, ಟಕ್ಕನ ವಚನಮುಂ ನಂಬಿ ನೆರೆಯೂರ್ಗೆ ಪೋಪನುಂ, ಡೊಂಬನ ಮಾತಂ ನಂಬಿ ಕೂಸು ಗೊಡುವನುಂ" ಅನುಭವಿಸುವ ನರಕಯಾತನೆಗೆ ಆ ಕಷ್ಟ ಕರ್ಮಿಗಳು ಈಡಾಗುವರು. ನಯಸೇನನ ಹೋಲಿಕೆಗಳು ಹೇಳಿ ಮಾಡಿಸಿದಂತೆ ಮನೋಹರವಾಗಿವೆ. ಅವುಗಳನ್ನು ಓದುತ್ತಲೇ ಮನಾನಂದವೆನಿಸುವುದು.

ನೆಲವಿಗೆ ಹಾರದ ಬೆಕ್ಕು ಸ್ವರ್ಗಕ್ಕೆ ಹಾರುವೆನೆಂದು ಜಂಭ ಕೊಚ್ಚುವಂತೆ ಅಸಾಧ್ಯವಾದುದನ್ನು ಸಾಧ್ಯಮಾಡಲೆಳಸುವ ಜಡ ಮತಿಗಳು ಸಮಾಜದಲ್ಲಿ ತುಂಬಿದ್ದಾರೆ. ಅವರಾಡುವ ಮಾತು ನಗೆಗೆ ಈಡಾಗುತ್ತವೆ. ಕೊರಳ ಶಕ್ತಿಯಿಲ್ಲದೆ ಒರಳು ನುಂಗುವೆ ನೆಂದು ಹೇಳಿದರೆ, ಆಡಿದಂತೆ ಮಾಡುವುದು ಸಾಧ್ಯವೆ ? ಕೈಯಲ್ಲಿ ಶಕ್ತಿ ಇಲ್ಲದವನು ಕಳ್ಳನನ್ನು ಹಿಡಿದು ಕಟ್ಟಬಲ್ಲೆನೆಂವರೆ ಕಾರ್ಯ ಸಾಧ್ಯವೆ ? ಕುರುಡಿ ಜೋಳವನ್ನು ಕುಟ್ಟಿದಂತೆ ಅಂಥವರ ಪಾಡು, ಹಲ್ಲಿಲ್ಲದ ಎಮ್ಮೆ ಹುಲ್ಲು ಮೇದರೇನಾಗುವುದು ? ನಗೆ ಪಾಟಲೇ ಸರಿ. ಒಬ್ಬ ಹಲ್ಲಿಲ್ಲದ ಮುದುಕ ಯೌವನೆಗೆ ಮನ

ಹೋತನಂತೆ.ಹಣವಿದ್ದ ಈ ಹೆಣದ ಬಯಕೆಯನ್ನು ಈಡೇರಿಸಲು ಹುಳಿ ಮೊದಮೊದಲು ಒಪ್ಪಿದಳು; ಹಿಂದುಗಡೆ ಯೋಚಿಸಿ ಅವನನ್ನು ಮನೆಬಿಡಿಸಿ ಅಟ್ಟಿದಳು. ಆಗ ಆ ಮುದುಕನಿಗೆ ಇಲ್ಲದ ಸಿಟ್ಟು. ಆತ ಹಲ್ಲು ಕಡಿಯುತ್ತ ನಿಂತನಂತೆ. ಇಂತಹ ವ್ಯಕ್ತಿಚಿತ್ರವನ್ನು ಕಂಡು ಓದುಗರು ನಗದೇ ಇದ್ದಾರೆಯೆ ?

ವಿಡಂಬಿಸುವುದು ನಯಸೇನನ ಹುಟ್ಟುಗುಣವಾಗಿದೆ. ಆತನು ಮಾತಮಾತಿಗೆ ವಿಡಂಬನೆಯ ಬಿಚ್ಚುಗತ್ತಿಯನ್ನೆ ಹಿರಿಯು ತ್ತಾನೆ. ನಗೆಗಾರ ನಯಸೇನನ ಪ್ರಭಾವ ಅವನ ಊರಾದ ಮುಳಗುಂದದ ಜನತೆಯ ಮೇಲೂ ಆದಂತಿದೆ. ಹರಿತವಾದ ವಿಡಂಬನೆಯನ್ನು ಅವರು ಇಂದಿಗೂ ಬಳಸುತ್ತಿದ್ದಾರೆ. ವಿಡಂಬ ನೆಯ ಕಥೆಗಳನ್ನು ಹೇಳಿ ಜನರನ್ನು ನಗೆಗಡಲಲ್ಲಿ ತೇಲಿಸುವ ರಸಿಕರು ಸಾಕಷ್ಟು ಇದ್ದಾರೆ. ಮುಳಗುಂದಕ್ಕೆ ಮೂರು ಅಗಸಿ! ಮೂರು ದಾರಿ !! ಒಟ್ಟಿನಲ್ಲಿ ಅವರು ನಡೆಯುವುದೇ ಮೂರಾ- ಬಟ್ಟೆ !!! ಆ ಮೂರು ದಾರಿಗಳು ಬಂದು ಕೂಡುವುದು ಸಂತೆಯ ಕೂಟಕ್ಕೆ. ಪೂರ್ವ ಕಾಲದಲ್ಲಿ, ಈ ಕೂಟವನ್ನು ಕಾಣಲು ಒಬ್ಬ ಬೌದ್ಧ ಸಂನ್ಯಾಸಿ, ಒಬ್ಬ ಜೈನ ಸಂನ್ಯಾಸಿ, ಮಗುದೊಬ್ಬ ಕಾಪಾಲಿಕ ಮುನಿ ಒಂದೊಂದು ದಾರಿಯನ್ನು ಹಿಡಿದು ತೀವ್ರ ವಾಗಿ ಬಂದರಂತೆ. ಬೌದ್ಧ ಸಂನ್ಯಾಸಿ ದೊಡ್ಡದೊಂದು ನಿಲು ವಂಗಿ ಹಾಕಿಕೊಂಡಿದ್ದ. ಜೈನ ಸಂನ್ಯಾಸಿಗೆ ಆಗಸವೆ ಹೊದಿಕೆ, ಕೈಪಕ್ಕೂ ಗತಿಯಿಲ್ಲ. ಕಾಪಾಲಿಕ ಮುನಿ ಮಾತ್ರ ಮೈತುಂಬ ಬೂದಿ ಬಳೆದುಕೊಂಡು ಕೌಪೀನವನ್ನು ಧರಿಸಿಕೊಂಡಿದ್ದ. ತೀವ್ರ ಗತಿಯಲ್ಲಿ ಕೂಟಕ್ಕೆ ಬಂದು ಗಕ್ಕನೆ ನಿಂತು ಒಬ್ಬರನ್ನೊಬ್ಬರು

ಸಂದರ್ಶಿಸಿದವರು ಜೈನಯತಿ ಮತ್ತು ಕಾಪಾಲಿಕಮುನಿ. ಜೈನ ಯತಿ ಬತ್ತಲೆಯಿದ್ದುದನ್ನು ನೋಡಿ ಕಾಪಾಲಿಕ ಅಸಹ್ಯಪಟ್ಟು ಕೊಂಡು "ಏನು ಸ್ವಾಮಿ, ತಮಗಂತೂ ಲಜ್ಜೆಯಿಲ್ಲ, ನಾಚಿಕೆ ಯಿಲ್ಲ. ಒಂದು ಕೌಪೀನವನ್ನಾದರೂ ಧರಿಸಬಾರದೆ ? ಕೂಟದ ಲ್ಲಿದ್ದ ಜನ ಏನಂದಾರು? ನಿಮಗೆ ಅದಕ್ಕೂ ಗತಿಯಿಲ್ಲದಿದ್ದರೆ ತೆಗೆದುಕೋ, ನನ್ನದು ತೆಗೆದುಕೊಡುತ್ತೇನೆ" ಎಂದು ಹೇಳಿ ತಾನು ಧರಿಸಿದ ಕೌಪೀನವನು ಬಿಚ್ಚಿ ಕೊಟ್ಟನಂತೆ. ಆಗ ಜಿನಮುನಿ "ಕಾಪಾಲಿಕರೇ, ತಡೆಯಿರಿ. ತಾವು ದಿಗಂಬರರಾದಿರಲ್ಲಾ ?" ಎಂದು ಹೇಳುವ ಹೊತ್ತಿಗೆ, ಬೌದ್ಧ ಸಂನ್ಯಾಸಿ ಭರದಿಂದ ಕೂಟಕ್ಕೆ ಬಂದು ನೋಡುತ್ತಾನೆ : ಈ ಮಹನೀಯರಿಬ್ಬರೂ ಬತ್ತಲೆಯಾಗಿದ್ದಾರೆ. ಅವರನ್ನೊಮ್ಮೆ ನೋಡಿ ಕಣ್ಣು ಮುಚ್ಚಿ ಕೊಂಡ : "ನಿಮ್ಮನ್ನು ಈ ಸ್ಥಿತಿಯಲ್ಲಿ ನೋಡಲಾರೆ : ಲಜ್ಜೆ ಗೆಟ್ಟವರಲ್ಲವೆ ತಾವು ? ತೆಗೆದುಕೊಳ್ಳಿ ನನ್ನ ನಿಲುವಂಗಿಯನ್ನು. ಎರಡಾಗಿ ಸೀಳಿ ಮರ್ಯಾದೆ ಮುಚ್ಚಿಕೊಳ್ಳಿರಿ." ಎಂದು ತನ್ನ ಅಂಗಿಯನ್ನೇ ಕಳೆದುಕೊಟ್ಟ. ಈಗ ಆತನೂ ದಿಗಂಬರನಾದುದು ಉಳಿದವರಿಗೂ ತಿಳಿಯಿತಂತೆ. ಒಟ್ಟಿನಲ್ಲಿ ಮೂವರು ಬತ್ತಲೆ ಯಾದುದನ್ನು ಕಂಡು ಕೂಟದ ಜನ ಘೊಳ್ಳೆಂದು ನಕ್ಕರಂತೆ. ಆ ಸಂನ್ಯಾಸಿ ತ್ರಯರು ಮಾತ್ರ "ನಾವೆಲ್ಲ ಹುಟ್ಟಿದಾಗಲೇ ಹೀಗಿ ದ್ದೇವೆ"ಂದು ತಮ್ಮ ಮುಖ ತಾವೇ ಮುಚ್ಚಿಕೊಂಡು ಹೋದ ರಂತೆ. ಈ ಕಥೆಯನ್ನು ಆ ಊರವರು ಇಂದಿಗೂ ಹೇಳುತ್ತಾರೆ. ಇದು ನಯಸೇನನ ಪ್ರಭಾವ ಎನ್ನಬಹುದೆ ? ನಯಸೇನನೇ ಈ ಕಥೆಯನ್ನು ಹೆಣೆದಿದ್ದರೂ ಹೆಣೆದಿರಬಹುದು. ಬೌದ್ಧರೂ

ಜೈನರೂ ಕಾಪಾಲಿಕರೂ ಇದ್ದುದು ಅವನ ಕಾಲದಲ್ಲಿ; ಇಂದು ಅವರಾರೂಇಲ್ಲ. ಅವರಿಲ್ಲದಾಗ ಇಂತಹ ಮಾತು ಹುಟ್ಟಲು ಸಾಧ್ಯವಿಲ್ಲ.

ನಗೆಯು ಕಥೆಗಳು ಅನುಭವಪೂರ್ಣವಾಗಿರುತ್ತವೆ. "ಹಬ್ಬದ ದಿನ ಅಮ್ಮಗಳ ತಲೆ, ಅಯ್ಯನವರ ಒಲೆ, ಒಡ್ಡರ ಮೊಲೆ-ತೆಕ್ಕೆಬಿದ್ದು ಅಳತ್ತಿದ್ದುವಂತೆ." ಎಷ್ಟೊಂದು ಮಾರ್ಮಿಕವಾದ ಹೇಳಿಕೆ ಇದು. ಇದನ್ನು ಕೇಳುತ್ತಲೇ ತಿಳಿನಗೆ ಸುಳಿಯತೊಡಗುವುದು.ಒಡೆದು ಹೇಳಿದಾಗಲಂತೂ ಆ ನಗೆ ತಿರುಗುಣಿಯ ಮಡುವಾಗಿ ನಿಲ್ಲುವುದು. ಯಾವ ಹಬ್ಬ ಹರಿದಿನವಿದ್ದರೂ ಮುಂಡೆಯರ ಮುಂಡೆಗೆ ಅಲಂಕಾರವಿಲ್ಲ. ಅಂದು ಅಯ್ಯನವರ ಊಟ ಭಕ್ತರ ಮನೆಯಲ್ಲಿ; ಆದ್ದರಿಂದ ಅವರ ಮನೆಯ ಒಲೆಯಲ್ಲಿ ಬೆಂಕಿಯನ್ನು ಹಾಕುವುದೇ ಇಲ್ಲ. ಒಡ್ಡರಿಗಂತೂ ಕುಬ್ಬಸ ಹಾಕುವುದೇ‌ಗೊತ್ತಿಲ್ಲ. ಹಬ್ಬ ಬಂದರೂ ಅವರ ಮೈ ಬರಿದೋ ಬರಿದು. ಕೆಲಸವಿಲ್ಲದ ಆ ಮೂರೂ ತಮ್ಮದನ್ನೇ ತಾವು ತೋಡಿಕೊಂಡು ತೆಕ್ಕೆಬಿದ್ದು ಅಳುವದು ಸಹಜ. ಈ ಕಥೆಗೂ ಮುಳುಗುಂದ ಜನತೆಯೇ ಆಧಾರ.

ಸಂಸಾರಿಗೆ ಚಿಂತೆ ತಪ್ಪಿದ್ದಲ್ಲ. ಮುದುಕರ ಚಿಂತೆಗಂತೂ ಮುಪ್ಪೇ ಇಲ್ಲ. ಒಬ್ಬರನ್ನೊಬ್ಬರು ಸಂದಿಸಿದಾಗ ತಮ್ಮ ತಮ್ಮ ಚಿಂತೆಯನ್ನು ತೋಡಿಕೊಳ್ಳುವುದು ಮಾನವರ ಸ್ವಭಾವ. ಒಂದು ಕಡೆಯಲ್ಲಿ ಒಬ್ಬ ಜಂಗಮರ ಮುದುಕಿ, ಒಬ್ಬ ಕುಂಬಾರರ ಮುದುಕಿ, ಒಬ್ಬ ನೇಕಾರರ ಮುದುಕಿ ಕೂಡಿಕೊತು ತಮ್ಮ ತಮ್ಮ ಮಕ್ಕಳ ಚಿಂತೆ ಮಾಡತೊಡಗಿದ್ದರು.

ಜಂಗಮರ ಮುದುಕಿ:—ತಾಯಿ, ನನಗೆ ಒಂದೇ ಚಿಂತೆ; ನಮ್ಮ ಹುಡುಗ ಸೋಮಾರಿ. ಆತನ ಕೈಯಲ್ಲಿ ಜೋಳಿಗಿ ಯಾವಾಗ ಬಂದೀತೋ ಅಂತೀನಿ !

ಕುಂಬಾರರ ಮುದುಕಿ :—ನನ್ನ ಮಗನೂ ಹಾಗೆ; ಅದು ಯಾವಾಗ ಮಣ್ಣಿಗೆ ಹೋದಿತೋ ಅಂತಿನಿ. ಮಣ್ಣುತಂದು ಮಡಕೆಮಾಡಿ ಮಾರಿದರೆ ನಮಗೇನು ಕಡಿಮೆ !

ನೇಕಾರ ಮುದುಕಿ:—ನನ್ನ ಹಿರೇಮಗ ಯಾವಾಗ ಕುಣಿ ಯಾಗ ಕೂತೀತೋ ಅಂತೀನಿ. ಕೂತು ನೈದರೆ ನಮಗೇನು ಕಷ್ಟ!

ಅಂತೂ ಒಬ್ಬೊಬ್ಬರಿಗೆ ಒಂದು ಚಿಂತೆ, ಅನೇಕರಿಗೆ ಅನೇಕ! ಚಿಂತೆ. ಅವರವರ ಚಿಂತೆ ಹಾಸುವಷ್ಟಿದೆ, ಹೊದೆಯು ವಷ್ಟಿದೆ. ಇದೇ ಸಂಸಾರದ ಸಾರ. ಕವಿಯ ಪ್ರಭಾವ ಜನತೆಯ ಮೇಲೂ ಜನತೆಯ ಪ್ರಭಾವ ಕವಿಯ ಮೇಲೂ ಆಗಬಲ್ಲುದೆಂದು ತಿಳಿಸಲು ಈ ಉದಾಹರಣೆ ಕೊಡಲಾಗಿದೆ. ಓದುಗರಿಗೆ ಬೇಕಾದುದು ನಗೆಯಲ್ಲವೆ ?

**ನಯಸೇನನ ಗಾದೆಗಳು :**

ಗಾದೆ ವೇದಕ್ಕೆ ಸಮವೆಂದು ಹೇಳುವವರೂ ಇದ್ದಾರೆ, ಹೇಳದವರೂ ಇದ್ದಾರೆ. ಅದು ಅನುಭವದ ಕೆನೆಯೆಂದು ಹೇಳಿ ದರೆ ಯಾರೂ ಎರಡು ನುಡಿಯುವುದಿಲ್ಲ. ಅನುಭವಿಕರು ಹೇಳಿದ ಲೋಕೋಕ್ತಿಯೇ ಗಾದೆ. ಜನತೆಯ ನಾಲಗೆಯ ಮೇಲೆ ಸುಳಿ ದಾಡಿ ಅದು ಪಳಗಿದೆ, ಬೆಳಗಿದೆ. ಇಂತಹ ನಾಣ್ಣುಡಿಗಳನ್ನು ಬಳಸಿಕೊಂಡು ತನ್ನ ಶೈಲಿಯ ಮೆರುಗನ್ನು ಹೆಚ್ಚಿಸಿಕೊಂಡವ

ನಯುಸೇನ. ಧರ್ಮಾಮೃತದಲ್ಲಿ ಸಾಕಷ್ಟು ಗಾದೆಗಳು ಬರುತ್ತವೆ. ನಗೆಯನ್ನು ಚಿಮ್ಮಿಸುವ ಗಾದೆಗಳೂ ತುಂಬಾ ಇವೆ. ಕೆಲವನ್ನು ಇಲ್ಲಿ ನೋಡಬಹುದು :

(i) ಪರದರೊಳ್ ಮರುಳಿಲ್ಲ; ಸೂಳೆ ಸಾಧುವಲ್ಲ.
(ii) ಮೋಹದಾಕೆ ಓತಿಯಾದಳೆಂಬಂತೆ.
(iii) ಎಡೆಯನರಸಾದೊಡೆ ಕೊಡೆಯ ಕಾವು ಮೇಗಾದುದೆಂಬಂತೆ.
(iv) ಕನಸಿನ ಬತ್ತಕ್ಕೆಚ್ಚತ್ತು ಗೋಣಿಯಾಂತಂತೆ.
(v) ಸೆಟ್ಟಿಯ ಮಾತೊಳ್ಳಿದುವು, ಬಳ್ಳಂ ಕಿಱಿದು.
(vi) ಪಂದಿ ಕೈಯಂ ತಿಂದೊಡೆ ಕತ್ತೆಯ ಕಿವಿಯಂ ಕೊಯ್ದರೆಂಬಂತೆ !
(vii) ಕೆರಪಂ ತಲೆಗೇಱಿಸಿಕೊಳ್ವರೆ ಕೂತೊರ್ಡೆ ?
(viii) ಕಳ್ಳುಡಿದು ಕುಣಿವಂಗೆ ಮತ್ತಂ ಪಱಿಯುವನುಂ ಕೂಡಿದಂತೆ.
(ix) ಕಡುವೆಸನಂ ಮಾಳ್ಪ ಸೊಸೆ ಮಾವನ ಮಂಡೆಯಂ· ಬೋಳಿಸದಳೆಂಬತೆ.
(x) ಕಳ್ಳನೊಕ್ಕಲಾದುದಿಲ್ಲ; ನಾಯಿ ಜಂಗುಳಿಯಾದುದಿಲ್ಲ·
(xi) ಪೆಂಡತಿಗೆ ಕೂರ್ಪಾತಂ ಅತ್ತೆಯೊಡನೆ ಕಿಚ್ಚು ವೊಕ್ಕ ನೆಂಬಂತೆ
(xii) ಅಂಗಾರಕವಾರದ ಪೆಸರ್ ಮಂಗಳವಾರಮೆಂಬಂತೆ·

ಇವೇ ಮೊದಲಾದ ಗಾದೆಗಳು ಮೆಲುಕುಹಾಕಿದಂತೆ ಬಗೆ ಬಗೆಯ ನಗೆಯನ್ನು ನೀಡುತ್ತವೆ. ಗಾದೆಯ ಅರ್ಥ ಹೊರ

ಹೊಮ್ಮಬೇಕಾದರೆ ಅನುಭವ ಮಾಗಬೇಕು. ಒಬ್ಬ ಬ್ರಾಹ್ಮಣ ಹೋಮ ಮಾಡುತ್ತಿದ್ದ. ನೊಣಗಳ ಕಾಟ ಅಲ್ಲಿ ಹೆಚ್ಚಾಗಿತ್ತು. ಅವನ ಮೈಮೇಲೆ ಕೂತು ಹಾರಿ ತೊಂದರೆ ಕೊಡಹತ್ತಿತ್ತು ಒಂದು ನೊಣ. ಕಾರ್ಯದಲ್ಲಿ ನಿರತನಾದ ಆ ವ್ಯಕ್ತಿಗೆ ಆ ನೊಣವನ್ನು ಹೊಡೆದು ಕೊಲ್ಲುವಷ್ಟು ಸಿಟ್ಟು ಬಂತು. ಮಾಡುವುದೇನು ? ಹಿಡಿದ ಕಾರ್ಯವನ್ನು ಬಿಡುವಂತಿಲ್ಲ; ನೊಣದ ಕಾಟವನ್ನು ಸೈರಿಸು ವಂತಿಲ್ಲ. ಹೀಗಿದ್ದಾಗ ಆತ ಸಿಟ್ಟಿಗೆದ್ದು ತನ್ನ ಕೈಯನ್ನು ಬಲವಾಗಿ ಬೀಸಿ ನೊಣಕ್ಕೆ ಹೊಡೆಯುತ್ತಿದ್ದ. ನೊಣ ತಪ್ಪಿಸಿಕೊಂಡು ಹಾರು ತ್ತಿತ್ತು. ಹೊಡೆತ ಮಾತ್ರ ಅದು ಕುಳಿತ ಸ್ಥಳಕ್ಕೇ ಬೀಳುತ್ತಿತ್ತು. ಕೆಲದೊಳಿದ್ದವರಿಗೆ ಇದು ತಿಳಿಯದು. ಅದೊಂದು ಹೋಮ ನಿಯಮವಿರಬೇಕೆಂದ ಅವರು ಬಗೆದರು. ತಾವೂ ಹಾಗೆ ಮಾಡಿ ದರೆ ಪುಣ್ಯಲಾಭವೆಂದು ಭಾವಿಸಿದರು. ಅವರೆಲ್ಲರೂ ತುಪ್ಪದ ಕೊಡದಲ್ಲಿ ಕೈಯನೆದ್ದಿ ತಂತಮ್ಮ ಬೆನ್ನುಗಳನ್ನೇ ಹೊಯ್ದು ಕೊಳ್ಳಲು ಪ್ರಾರಂಭಿಸಿದರು. ಇದನ್ನೂ ಅನುಭವಪೂರ್ಣವಾಗಿ ಹೇಳುವ ನಯಸೇನ ನಗದವರನ್ನೂ ನಗಿಸುತ್ತಾನೆ. ಈ ಗಾದೆ, ಸಾಮತಿ, ನಾಣ್ಣುಡಿಗಳಲ್ಲಿ ಅಡಗಿರುವ ಮರ್ಮವನ್ನು ಅರಿತಷ್ಟು ನಗೆ ಹುಲುಸಾಗಿ ಬರುತ್ತದೆ.

## ಉಪಮಾಲೋಲ ನಯಸೇನ :

ನಯಸೇನನ ಲೋಕಾನುಭವ ಅದ್ವಿತೀಯವಾದುದು. ಆತನ ಒಳಗಣ್ಣಿಗೆ ಕಾಣದ ವಸ್ತುವೇ ಇಲ್ಲ. ಜನಜೀವನವನ್ನು ಅವನಷ್ಟು ತೀಕ್ಷ್ಣವಾಗಿ ಅವಲೋಕಿಸಿದ ಕವಿಗಳೂ ವಿರಳ.

ಅಂತೆಯೇ ಒಂದಕ್ಕೆ ಹತ್ತು ಹೋಲಿಕೆ ಕೊಡುವ ಶಕ್ತಿ ಆತನಿಗೆ ಸಹಜವಾಗಿ ಬಂದು ಬಿಟ್ಟಿದೆ. ಒಂದರ ಮೇಲೊಂದು ಉಪಮಾನ ಕೊಡುತ್ತ ಹೋಗಿ, ಕೊನೆಗೆ ಉಪಮಾನಗಳ ಸರಪಳಿಯನ್ನೇ ನಮ್ಮೆದುರು ನಿಲ್ಲಿಸುತ್ತಾನೆ. ಇದರಿಂದ ಹೇಳಬೇಕಾದ ವಿಷಯ ಪರಿಪೂರ್ಣಗೊಳ್ಳುವುದರ ಜೊತೆಗೆ ಲೋಕಾನುಭವವೂ ವೇದ್ಯವಾಗುವುದು. ಜನತೆ ಅಂತಹ ಉಪಮಾನಗಳನ್ನು ಕೇಳಿರಬಹುದು. ಆದರೆ ಅವೆಲ್ಲ ಒಮ್ಮೆಲೇ ನೆನಪಾಗುವುದು ದುಸ್ತರ. ನಯಸೇನನಿಗೆ ಮಾತ್ರ ಅದೊಂದು ಲೀಲಾಜಾಲ. ಕೆಲಕೆಲವು ಹೋಲಿಕೆಗಳಂತೂ ತುಂಬಾ ಹಾಸ್ಯಮಯವಾಗಿವೆ. ಅಪೂರ್ವವಾದ ದರ್ಶನವನ್ನೂ ಸದ್ಧರ್ಮವನ್ನೂ ತಿರಸ್ಕರಿಸಿ ವಿಷಯಗಳ ಬೆನ್ನುಹತ್ತಿದ ಪುಲುಮಾನವರ ಸ್ಥಿತಿ "ಪಾದರಿಗಗಂಡನಂ ನಂಬಿ ಮನೆಯ ಗಂಡನಂ ಬಿಡುವಂತೆ, ಸಜ್ಜನವೆಂಡತಿಯನೊಲ್ಲದೆಗಾಳುವಪ್ಪ ಸೂಳೆಯಂ ಮೆಚ್ಚುವಂತೆ, ಮೂಱುದಿನದ ಪಗರಣಕ್ಕೆ ಗಡ್ಡಮೀಸೆ ಮುಂಡೆಯಂ ಬೋಳಿಸಿಕೊಳ್ವಂತೆ." ಹಳ್ಳಿಗಳಲ್ಲಿ ಬಯಲಾಟ ಜರುಗುತ್ತವೆ. ಹೆಣ್ಣು ಪಾತ್ರಗಳನ್ನು ಗಂಡಸರೇ ಧರಿಸುವರು. ಒಂದು ದಿನದ ಆಟಕ್ಕಾಗಿ ಮೀಸೆ ಬೋಳಿಸಿಕೊಂಡು ತಿಂಗಳಾನುತಿಂಗಳ ಬಾಯ ಮೇಲೆ ಕೈಯಿಟ್ಟುಕೊಂಡು ತಿರುಗಾಡುವ ಜನ ಸಾಕಷ್ಟು. ಅವರನ್ನು ಕಂಡರೇ ನಗೆ ಬರುತ್ತದೆ. ಇಂತಹ ನಗೆಯ ಸನ್ನಿವೇಶದ ಹೋಲಿಕೆಗಳು ನಯಸೇನನ ಕೃತಿಯಲ್ಲಿ ತುಂಬಿವೆ.

ಯಾವನೋ ಒಬ್ಬ ಶಕಾರದೊರೆ ತನ್ನನಾಯಕುನ್ನಿಗೆ ತನ್ನ ರಾಜ್ಯವನ್ನೇ ಕೊಟ್ಟು ಬಿಟ್ಟನಂತೆ. ನಾಯಿಯ ನಾಯಕತ್ವದಲ್ಲಿ

ರಾಜ್ಯಕಾರಭಾರ ನಡೆಯತೊಡಗಿತು. ನಾಯಿ ಸಿಂಹಾಸನದಲ್ಲಿ ಕೂಡ್ರುತ್ತಿತ್ತು. ಮಾಂಡಳಿಕ ದೊರೆಗಳು ಕಪ್ಪಕಾಣಿಕೆ ಅರ್ಪಿಸುತ್ತಿದ್ದರು. ಭಟ್ಟಂಗಿಗಳು ನಾಯಿ-ಮಹಾರಾಜನನ್ನು ಬಾಯ್ತುಂಬ ಹೊಗಳುತ್ತಿದ್ದರು. ತೂಲಿಕಾತಲ್ಪದಲ್ಲಿ ಅದಕ್ಕೆ ಶಯನ. ಅದನ್ನು ಮೇಣೆಯಲ್ಲಿ ಕೂಡ್ರಿಸಿ ರಾಜಬೀದಿಯಲ್ಲಿ ಮೆರೆವಣಿಗೆ ನಡೆಯಬೇಕು. ನಗಾರಿ ನೌಬತ್ತು ಭೋರ್ಗರೆಯಬೇಕು. ಹೀಗೆ ವೈಭವಪೂರ್ಣ ಮೆರೆವಣಿಗೆ ಹೊರಟಾಗ ಬೀದಿಯ ಪಕ್ಕದಲ್ಲಿ ಬಿದ್ದ ಒಂದು ಎಲುವು ನಾಯಿಮಹಾರಾಜನಿಗೆ ಕಾಣಿಸಿತಂತೆ. ಅದು ಟಣ್ಣನೆ ಜಿಗಿದು ಹೋಗಿ ಎಲುವನ್ನು ಕಡಿಯುತ್ತ ನಿಂತುಬಿಟ್ಟಿತಂತೆ. ಈ ಹೋಲಿಕೆಯನ್ನು ಕೊಡುತ್ತಲೇ ಹೀನಮಾನವನಿಗೆ ಎಂತಹ ದೊಡ್ಡಸ್ತಿಕೆ ಬಂದರೂ ತನ್ನ ಮುನ್ನಿನ ಸ್ವಭಾವ ಬಿಡನೆಂದು ಕವಿ ತಿಳಿಸುತ್ತಾನೆ. ಈ ಹೋಲಿಕೆ ಕವಿಯ ಹೇಳಿಕೆಯಲ್ಲಿ ಬಹು ಅಂದವಾಗಿ ಬರುತ್ತದೆ. ನಗೆಗೂ ಇಲ್ಲಿ ಸಾಕಷ್ಟು ಅವಕಾಶ ಸಿಕ್ಕಿದೆ.

ಅಲ್ಪವಾದುದನ್ನು ಮಹತ್ತಿಗೇರಿಸಿ ಮಾತನಾಡುವ ಜನ ಸಾಕಷ್ಟು ಇದ್ದಾರೆ. ತಾವು ನಿಜವಾಗಿ ಉಪವಾಸವಿದ್ದರೂ ಹೋಳಿಗೆತುಪ್ಪವನ್ನು ತಿಂದೆವೆಂದು ಹೇಳಿಕೊಳ್ಳುವುದರಲ್ಲಿಯೇ ಅವರಿಗೆ ಜಂಭ. ಅಂಥವರ ಸ್ಥಿತಿಯನ್ನು ನಯಸೇನ ಹೇಳುವ ಪರಿ ಇದು; "ತವುಡಂ ತಿಂದು ತುಯ್ಯಲನುಂಡೆನೆಂಬಂತೆ, ನಾಯ ನೇಜಿ ಕರಿಯನೇಜಿದೆನೆಂಬಂತೆ, ಗಂಜಿಯಂ ಕುಡಿದು ಕಳವೆಯ ಕೂಳನುಂಡೆನೆಂಬಂತೆ, ಬಾಳೆಲೆಯಂ ತಿಂದು ಪಣ್ಣಂ ತಿಂದೆನೆಂಬಂತೆ, ಕಬ್ಬಿನಡಿಯ ಬೇರಂ ತಿಂದು ಕಬ್ಬಂ ಮೆಲ್ದೆನೆಂಬಂತೆ"

ಸಂಸಾರದ ಅಲ್ಪಸುಖವನ್ನೇ ಮಹಾಸುಖವೆಂದು ಅವರು ಭಾವಿಸುತ್ತಾರೆ. ನಯಸೇನನ ಹೋಲಿಕೆಗಳು ಅನುಭವದ ಕೆನೆ; ವಾಸ್ತವತೆಯ ಸೊನೆ. ಅವು ಸಣ್ಣವರಿಗೂ ತಿಳಿಯುವಷ್ಟು ತಿಳಿಯಾಗಿವೆ. ಅಲ್ಪರ ಒಣಡೌಲನ್ನು ಹೊರಗೆಳೆದು ನುಡಿವಲ್ಲಿ ವಿಡಂಬನೆ ಮೂಡಿ ನಿಲ್ಲುತ್ತದೆ; ನಗೆಯ ಚಾಟಿ ಬಗ್ಗಿ ಬಳುಕಾಡುತ್ತದೆ.

**ಕಥೆಗಾರ ನಯಸೇನ :**

ಕನ್ನಡ ಸಾರಸ್ವತ ಪ್ರಪಂಚದಲ್ಲಿ ಕಥನ ಕಲೆ ಮೊದಲಿನಿಂದ ಬೆಳೆದು ಬಂದಿದ್ದರೂ ಅದು ಕಲಾತ್ಮಕವಾಗಿ ಕಂಡುಬರುವುದು ನಯಸೇನನ ಧರ್ಮಾಮೃತದಲ್ಲಿ ಮಾತ್ರ. ಅದು ಕಥೆಗಳ ಸಾಗರವೆನ್ನಬೇಕು. ಪ್ರತಿಯೊಂದು ವಿಷಯಕ್ಕೂ ಒಂದೊಂದು ಕಥೆ ಮಿಸಲು. ಕೆಲವು ಕಥೆಗಳಲ್ಲಿ ಕಥೆಗೊಂದು ಕಥೆ ಹುಟ್ಟಿ, ಒಂದು ಕಥೆಗೆ ಹಲವಾರು ಉಪಕಥೆಗಳು ಮೂಡಿಬಂದದು ಕಾವ್ಯಕ್ಕೊಂದು ಹೊಸ ಮೆರುಗು ನೀಡಿದಂತಾಗಿದೆ. ಕಥೆಗಳನ್ನು ಹೇಳುತ್ತಲೇ ಜೈನ ಧರ್ಮವನ್ನು ಪ್ರಚಾರ ಮಾಡುತ್ತಾನೆ ನಯಸೇನ. ಅತನ ಹಾಸ್ಯ ಪದಪ್ರಯೋಗ, ಸನ್ನಿವೇಶಗಳ ಹೃದಯಂಗಮ ಚಿತ್ರ, ಪಾತ್ರ ರಚನಕೌಶಲ ಪ್ರತಿಯೊಂದು ಕಥೆಯಲ್ಲಿ ಹಾಸುಹೊಕ್ಕಾಗಿ ಬಂದಿರುವುದರಿಂದ ಕೇಳುವುದಕ್ಕೆ ಅವು ಬೇಸರವೆನಿಸುವುದಿಲ್ಲ.

ಸತ್ಯವ್ರತದ ಕಥೆಯಂತೂ ಕಥಾಪ್ರಪಂಚದಲ್ಲಿಯೇ ಹೆಚ್ಚು ಕಲಾತ್ಮಕವಾಗಿದೆ. ಕಥೆಯ ಸಂವಿಧಾನದಲ್ಲಿ ಚಾತುರ್ಯವಿದೆ. ತರ್ಕವಿದೆ, ಸ್ಪರ್ಧೆಯಿದೆ. ಒಂದು ಕಥೆ ಮುಗಿಯುತ್ತಲೇ ಮತ್ತೊಂದು ಕಥೆಗೆ ಆರಂಭ ದೊರೆಯುತ್ತದೆ; ಕಥಾಸ್ಪರ್ಧೆಯೇ

ಅಲ್ಲಿ ಏರ್ಪಟ್ಟು ಬಿಡುತ್ತದೆ. ಒಬ್ಬ ಸೆಟ್ಟಿ ಜಿನಮುನಿಯೊಬ್ಬನನು ತನ್ನ ಮನೆಗೆ ಕರೆದುತಂದು ಅತಿಥಿಸತ್ಕಾರವನ್ನು ಮಾಡುತ್ತಾನೆ. ಸೆಟ್ಟಿಯ ಮಗನೊಬ್ಬ ಮಹಾಕಳ್ಳನಾಗಿದ್ದ. ಜಿನಮುನಿಯನ್ನು ಬೀಳ್ಕೊಡುವ ಮೊದಲು ದಿನವೇ ಸ್ವಲ್ಪ ಬಂಗಾರವನ್ನು ಅಪ್ಪನ ಬೊಕ್ಕಸದಿಂದ ಹಾರಿಸುತ್ತಾನೆ. ಆ ಕಳವು ಜಿನಮುನಿಯ ಪಾಲಿಗೆ ಮೀಸಲಾಗುವುದು. ಸೆಟ್ಟಿ ಆ ಜಿನಮುನಿಯನ್ನು ಕರೆದು ಒಂದು ಕಥೆ ಹೇಳುತ್ತಾನೆ. ಮುನಿಗೆ ಈ ವಿಷಯ ವೇದ ವಾಗುತ್ತದೆ. ತಾನು ಆ ಬಂಗಾರವನ್ನು ಕದ್ದಿಲ್ಲವೆಂಬುದನ್ನು ತೋರಿಸಲು ತಾನೊಂದು ಕಥೆ ಹೇಳುತ್ತಾನೆ. ಹೀಗೆಯೇ 'ಒಬ್ಬನದು ಮುಗಿಯುತ್ತಲೇ ಇನ್ನೊಬ್ಬನದು ಆರಂಭ' ಎನ್ನು ವಂತೆ ಅನೇಕ ಕಥೆಗಳು ಹೇಳಲ್ಪಡುತ್ತವೆ. ಕೊನೆಗೆ ಸೆಟ್ಟಿಯ ಮಗನು ತಾನು ಮಾಡಿದ ಅಪರಾಧಕ್ಕಾಗಿ ನಾಚಿಕೊಂಡು ತಾನೇ ಕಳ್ಳನೆಂದು ಒಪ್ಪಿಕೊಳ್ಳುತ್ತಾನೆ. ಸನ್ಮಾರ್ಗವನ್ನು ಹಿಡಿಯುತ್ತಾನೆ. ಈ ಕಥೆಗಳಲ್ಲಿ ಸೆಟ್ಟಿ ಸನ್ಯಾಸಿ–ಇಬ್ಬರಿಗೂ ಕಳವಿನ ವಿಷಯ ಗೊತ್ತಿದೆ. ಅದನ್ನು ನೇರವಾಗಿ ಹೇಳದೆ ಕಥೆಯ ಮುಖಾಂತರ ತಿಳಿ ಸುವಲ್ಲಿ ಒಂದು ಜಾಣ್ಮೆ ಇದೆ, ಅನೇಕ ಕಥೆಗಳು ಬಂದರೂ ಮೂಲ ಕಥೆಗೆ ಭಂಗಬಾರದಂತೆ ನೋಡಿಕೊಳ್ಳುವಲ್ಲಿ ಕವಿಯ ಚಾತುರ್ಯ ಸಾಕಷ್ಟು ಕಾರ್ಯಮಾಡಿದೆ. ಈ ಕಥೆಗಳು ಕೇಳುವವರಿಗೆ ಬೇಸರವನ್ನೇ ತರುವುದಿಲ್ಲ. ಹೇಳಿದಷ್ಟು ಕೇಳಬೇಕೆನಿಸುತ್ತದೆ. ಅದೇ ಕಥನಕಲೆಯ ಮರ್ಮ; ಅದನ್ನು ನಯಸೇನ ಬಹು ಮನೋಹರವಾಗಿ ಸಾಧಿಸಿದ್ದಾನೆ.

ತತ್ತ್ವ, ಧರ್ಮ, ನೀತಿ-ಬೋಧಿಸುವುದೇ ನಯಸೇನನ ಕಥೆಗಳ ಗುರಿಯಾಗಿದ್ದರೂ ಸತ್ಯವ್ರತದ ಕಥೆಗಳ ಬರುವ ಮೂಲ ವಿಷಯ ಕಥೆಗಾರರಿಬ್ಬರಿಗೆ ಗೊತ್ತಿದ್ದರೂ ಕೇಳುವವನಿಗೂ,ಹೇಳುವವನಿಗೂ ಅದುತಿಳಿಯದೆಂದು ತಿಳಿದು ಹೇಳುವಲ್ಲಿ ತರ್ಕವಿದೆ, ಜಾಣ್ಮೆಯಿದೆ, ಕಥನ ಕಲೆಯಿದೆ. ಅದಕ್ಕಾಗಿ ಆ ಕಥೆಗಳೇ ನಮಗೆ ನಗೆ ಬರುವಂತೆ ಮಾಡುತ್ತವೆ. ಇದ್ದ ಮೂವರಲ್ಲಿ ಕದ್ದವರಾರು ? ಎಂಬುದು ತಿಳಿಯುವ ತನಕ ನಾವು ನಗುತ್ತಲೇ ಕಥೆ ಕೇಳುತ್ತೇವೆ. ಕಥೆ ಹೇಳುವಲ್ಲಿ ಒಬ್ಬನಿಗಿಂತ ಇನ್ನೊಬ್ಬ ಚತುರಮತಿಯಾಗಿರುವುದರಿಂದ ಸ್ಪರ್ಧೆ ಬೆಳೆದು ತುಲನೆಯ ತೂಕ ನಾಕ-ನರಕಗಳತ್ತ ಏರಿ-ಇಳಿದು ನಮ್ಮ ಹಾಸಭಾವಕ್ಕೆ ಕಚಕುಳಿಯನ್ನೊದಗಿಸುತ್ತದೆ. ಹೀಗಾದಲ್ಲಿ ನಗದವನೂ ನಗುತ್ತಾನೆ. ನಗುತ್ತಲೇ ಆ ಕಥೆಗಳನ್ನು ಮತ್ತೊಬ್ಬರಿಗೆ ಹೇಳಿ ನಗಿಸುತ್ತಾನೆ. ಹೇಳಿ, ಕೇಳಿ ನಗಬೇಕೆಂದೇ ನಯಸೇನ ಈ ಕಥೆಗಳನ್ನು ಬರೆದನೋ ಏನೋ ಅನಿಸುತ್ತದೆ

**ಕೊನೆಗೆ ಮೊದಲು :**

ನಯಸೇನ ಒಬ್ಬ ಸತ್ಕವಿ. ಕಾವ್ಯಮಾರ್ಗವನ್ನು ಸುಲಭಗೊಳಿಸಿದವರಲ್ಲಿ ಈತನೇ ಮೊದಲಿಗನೆನ್ನಬಹುದು. ಪ್ರತಿಭೆ ಪಾಂಡಿತ್ಯಗಳು ಸಾಕಷ್ಟಿದ್ದರೂ ದೊಡ್ಡವರ ಶ್ರೇಣಿಗೆ ಆಸೆ ಮಾಡದೆ, ಪಾಮರರ ಉದ್ಧಾರಕ್ಕಾಗಿ ದುಡಿದು, ಜನಪ್ರಿಯ ಕವಿ ಎನಿಸಿಕೊಳ್ಳುವಲ್ಲಿಯೇ ಆತನಿಗೊಂದು ಹೆಮ್ಮೆ. ಜಿನತತ್ವವನ್ನು ಸಾರುವುದೇ ಅವನ ಗುರಿ. ಧರ್ಮಪ್ರಚಾರ ಮಾಡುವುದೇ

ಆತನ ಸಿರಿ. ಅದನ್ನು ಸಾಧಿಸಲು ಕೈಕೊಂಡುದೇ ಈ ಕಥನ ಮಾರ್ಗ. ನಯಸೇನನ ಕಾವ್ಯಮಾರ್ಗಕ್ಕೆ ಆತನೇ ಆದಿ, ಆತನೇ ಅಂತ್ಯ. ನಕ್ಕು ನಗಿಸುವಾ ನಗೆ ಲೇಸುನಗೆಯೆಂದು ಹೇಳದೆ, ನಗಿಸಿದ ನಿಷ್ಕಾಕ ಕವಿರ್ಮ ಆತ. ಆತನ ಸತ್ಯನಿಷ್ಠೆ, ನಿಷ್ಠುರವಾದ, ಸ್ವಧರ್ಮದ ಅಭಿಮಾನ ಕೆಲವೆಡೆಗಳಲ್ಲಿ ವಿಡಂಬನೆಯ ಮಡು ಗಳನ್ನೇ ನಿರ್ಮಿಸಿದೆ. ಅಲ್ಲಿ ಎದ್ದ ನಗೆಯ ತೆರೆಗಳು ಜನಮನಕ್ಕೆ ತಾಕುತ್ತವೆ. ಕವಿಯ ಲೋಕಾನುಭವ ಮಾನವಸ್ವಭಾವವನ್ನು ಸೂಕ್ಷ್ಮವಾಗಿ ತಿಳಿಸುತ್ತದೆ. ಹೇಳುವುದನ್ನೇ ಸ್ಪಷ್ಟವಾಗಿ ಹೇಳಲು ಆತ ಬಳಸಿರುವ ಗಾದೆ, ಸಾಮತಿ, ಹೋಲಿಕೆ ಆತನ ಶೈಲಿಯ ಜೀವಜೀವಾಳವಾಗಿದೆ.

ತಪ್ಪು ಎನಿಸಿದದು ಎಲ್ಲಿದ್ದರೂ ಅದು ಇರಬಾರದೆಂಬುದೇ ನಯಸೇನನ ಮತ. ತಪ್ಪು ಮಾಡಿದವರು ಜೈನರೇ ಇರಲಿ. ಯಾರೇ ಇರಲಿ; ಅವರ ತಪ್ಪನ್ನು ಹೊರದೆಗೆದು ನಗೆಯಾಡು ವುದೇ ಕವಿಗೆ ರೂಢಿಯಾಗಿದೆ. ಒಮ್ಮೊಮ್ಮೆ ವಿಡಂಬನೆಯ ಪೆಟ್ಟು ಬಲವಾಗಿ ಬೀಳುತ್ತದೆ. ದೊಡ್ಡ ತಪ್ಪಿಗೆ ದೊಡ್ಡ ಏಟು ಬೇಕು-ಎನಿಸಿರಬೇಕು ಆತನಿಗೆ, ಅವನ ಸಾಹಿತ್ಯವನ್ನು ಸರಿಯಾಗಿ ಓದದವರು ನಯಸೇನನಲ್ಲಿ ಪರಮತಸಹಿಷ್ಣುತೆ ಇಲ್ಲೆಂದು ಹೇಳಿ ದ್ದಾರೆ. ಅದು ನಿಜವಾಗಿಯೂ ತಪ್ಪು. ಸ್ವಧರ್ಮಾಭಿಮಾನ, ಪರ ಧರ್ಮ ಸಹಿಷ್ಣುತೆ ಅವನಲ್ಲಿವೆ. ಆದರೆ ವಿಡಂಬಕನಾದ ಆತನು ಅವೆರಡನ್ನೂ ಮೀರಿ ಕೆಲಸಮಾಡಬೇಕಾದುದರಿಂದ ನಿಷ್ಠುರವಾದಿ ಯಾಗಿದ್ದಾನೆ, ಅಷ್ಟೇ! ಕಂಡದ್ದ ನಾಡಿದರೆ ಕೆಂಡದಂತಹ ಸಿಟ್ಟು!!

ಕನ್ನಡಿಯಂ ತೋಱುವೊಡ
ತ್ಮನ್ನತ ಸಲ್ಲಕ್ಷಣಂಗೆ ಮುನಿಸಾಗದು ಮ
ತ್ತೆನ್ನದೆ ಮೂಕೊಱೆಯಂಗಂ
ಕನ್ನಡಿಯಂ ತೋಱೆ ಬಡಿಗುಮಿಱಿಗುಂ ಕೋಲ್ಗಂ ॥

ಯಾರು ಏನೇ ಅನ್ನಲಿ; ಉತ್ತಮ ವಿಡಂಬಕ ಸತ್ಪಥವನ್ನು ಬಿಟ್ಟು ದೂರ ಸರಿಯಲಾರ. ತನ್ನ ಕಾರ್ಯವನ್ನು ಮಾಡಿ ಮುಗಿಸುವಲ್ಲಿಯೇ ಆತನಿಗೆ ತೃಪ್ತಿ. ಆತನನ್ನು ಅಂದಿನವರು ಮೆಚ್ಚಿಕೊಂಡಿರಲಿಕ್ಕಿಲ್ಲ. ಇಂದು ಕಾಲ ಬದಲಾಗಿದೆ. ನಗುನಗುತ್ತಾ ನಾಲ್ಕುದಿವಸ ಇರಬೇಕೆನ್ನುವ ಬುದ್ಧಿ ನಮಗೆ ಬರತೊಡಗಿದೆ. ಆದಕ್ಕಾಗಿ ನಗೆಗಾರ ನಯಸೇನ ಇಲ್ಲದೆ ಬಾಳುವುದು ಅಸಾಧ್ಯವಾಗಿ ಬಿಟ್ಟಿದೆ. ನಕ್ಕು ನಲಿಯುವ ನಮಗೆ ನಯಸೇನನೇ ಸಾಕು; ನಯಸೇನತ್ವ ಅಜರಾಮರ !

———

# ಉಪನ್ಯಾಸ ಗ್ರಂಥಮಾಲೆಯ ಇತ್ತೀಚಿನ ಪ್ರಕಟನೆಗಳು

ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ

ಕಾರವಾರ ಜಿಲ್ಲೆಯ ಶಾಸನಗಳು — ಆರ್. ಎನ್ ಗುರವ

ಕನ್ನಡದಲ್ಲಿ ಸಾಂಗತ್ಯ ಸಾಹಿತ್ಯ — ವೀರಣ್ಣ ರಾಜೂರ

ಮಾನಸಿಕ ರೋಗಗಳು — ಎಂ. ಬಿ. ರೇಣುಕಾರ್ಯ

ಕನ್ನಡದಲ್ಲಿ ಕಾದಂಬರಿ ಸಾಹಿತ್ಯ — ದು. ನಿಂ. ಬೆಳಗಲಿ

ಗರತಿಯರ ಹಾಡುಗಳಲ್ಲಿ
ಕೌಟುಂಬಿಕ ಜೀವನ ಚಿತ್ರಣ — ದೇವೇಂದ್ರಕುಮಾರ ಹಕಾರಿ

ಮಾನವ ಮತ್ತು ಶಾಕಾಹಾರ — ಎ. ಎಸ್. ಧರಣೇಂದ್ರಯ್ಯ

ಕರ್ನಾಟಕದಲ್ಲಿ ರಾಷ್ಟ್ರೀಯತೆಯ
ಬೆಳವಣಿಗೆ — ಎನ್. ಎ. ಪಾಟೀಲ

ಜಾನಪದ ಸಾಹಿತ್ಯದಲ್ಲಿ ಮಾತೃವಾತ್ಸಲ್ಯ— ಲೀಲಾವತಿ ತೋರಣಗಟ್ಟಿ

ಜನಪದದಲ್ಲಿ ಮಕ್ಕಳ ಸಾಹಿತ್ಯ — ಸಂಗಮೇಶ ಎಂ. ಬಿರಾದಾರ

ಪ್ರೇಮಚಂದರ ಸಣ್ಣ ಕತೆಗಳು — ಬಿ. ಎಫ್. ಹಸರಾಣಿ

---

ವ್ಯಾಸಂಗ ವಿಸ್ತರಣ-ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦೦೦೩